# ದೈವ ಗ್ರಂಥದಲ್ಲಿ

# ಸತ್ಯಾಸತ್ಯ ವಿಚಕ್ಷಣೆ

| | | |
|---|---|---|
| ಶೂನ್ಯ | - | ಕಾಣಿಸುವುದಿಲ್ಲ |
| ಶಬ್ದ | - | ಕಾಣಿಸುವುದು |
| ಪಾಪ | - | ಕಾಣಿಸುವುದಿಲ್ಲ |
| ಶಿಕ್ಷೆ | - | ಕಾಣಿಸುವುದು |
| ದೇವರು | - | ಕಾಣಿಸುವುದಿಲ್ಲ |
| ಜ್ಞಾನ | - | ಕಾಣಿಸುವುದು |
| ಜಿಬ್ರಯೇಲ್ | - | ಕಾಣಿಸುವುದಿಲ್ಲ |
| ಬೋಧನೆ | - | ಕಾಣಿಸುವುದು |


ಗ್ರಂಥಕರ್ತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (84) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**



www.thraithashakam.org







# ದೈವ ಗ್ರಂಥದಲ್ಲಿ
# ಸತ್ಯಾಸತ್ಯ ವಿಚಕ್ಷಣೆ


ಗ್ರಂಥಕರ್ತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (85) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ**

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜನವರಿ–2017

ಪ್ರತಿಗಳು : 1000 **ಬೆಲೆ. 50/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆಗಳು-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಿ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧಿ ಬೋಧನೆ.
34. ಸುಪ್ರಸಿದ್ಧಿಬೋಧನೆ.
35. ಶಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು-ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ - ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲು ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು-ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು-ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ
88. ನಿನಗೆ ನನ್ನ ಲೇಖ
89. ಹಿಂದೂ ಮತದಲ್ಲಿಯೇ ಕುಲವಿವಕ್ಷ
90. ದೇವರ ಮುದ್ರೆ
91. ಯೋಹಾನ ಸುವಾರ್ತೆ
92. ಧರ್ಮಚಕ್ರ



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು– ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ಅದ್ವಿತೀಯುಡು.
39. ಎದಮೀದಮುದ್ರ–
ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.
62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
ದೇಹಂ ಮೋಹಂ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
ಮಹೇಂದ್ರಜಾಲ,
ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
(ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು
ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಶವಮು – ಶಿವಮು
119. ಧರ್ಮಚಕ್ರಮು
120. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಲಕ್ಷ್ಮಿನಾರಾಯಣಾಚಾರಿ**–09440556968. **ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್**.B
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾ ನಗರ, ತೊಣಚಿಕೊಪ್ಪಲ್,
ಮೈಸೂರ್–547097
Cell : 9141109799, 9986369118

**T.V. ರಮಣ**
NGR ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲೀಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

## ಪ್ರಥಮ ದೈವ ಗ್ರಂಥ

# ತ್ರೈತ ಸಿದ್ಧಾಂತ ಭಗವದ್ಗೀತೆ

**(578 ಶ್ಲೋಕಗಳ ವಚನ ಗ್ರಂಥ)**

ಇದು ಆಧ್ಯಾತ್ಮಿಕ ವಿದ್ಯೆಯಲ್ಲಿ ವಿಪ್ಲವಾತ್ಮಕ ತಿರುವು ತಿರುಗಿದ ಭಗವದ್ಗೀತೆ. 55 ಶ್ಲೋಕಗಳಿಗೆ ಪೂರ್ತಿ ಭಾವ ಬದಲಾವಣೆಯೊಂದಿಗೆ ತಯಾರಾಗಿದೆ. ಮೂರು ಆತ್ಮಗಳನ್ನು ಕುರಿತು ಶಾಸ್ತ್ರಾಧಾರದಿಂದ ವಿವರಿಸಿ ಬೋಧಿಸಿದ ಮೊಟ್ಟ ಮೊದಲ ಭಗವದ್ಗೀತೆ. ಮೊದಲು ಎಷ್ಟೋ ಜನರು ಬರೆದ ಭಗವದ್ಗೀತೆಗಳಿಗೆ ನೂರಕ್ಕೆ 90ರಷ್ಟು ವಿಭಿನ್ನ ಭಾವಗಳಿಂದ ಕೂಡಿಕೊಂಡಿದೆ. ಎಷ್ಟೋ ಪ್ರತ್ಯೇಕ ಅರ್ಥಗಳೊಂದಿಗೆ ದೇವರು ಹೇಳಿದ ನಿಜ ಭಾವಗಳನ್ನು ಹೇತುಬದ್ಧವಾಗಿ ವಿವರಿಸಿರುವುದು ಮತ್ತು ಹೇತುವಾದಿಗಳು ಸಹ ಖಂಡಿಸಲಾರದ ಭಗವದ್ಗೀತೆ ಇದು ಒಂದೇ. ಗರ್ಭಸ್ಥ ಶಿಶುವಿಗೆ ಪ್ರಾಣ ಇಲ್ಲ ಎನ್ನುವುದು, ಹತ್ಯೆಯನ್ನು ವಿವರಿಸಿ ಆತ್ಮಹತ್ಯೆಯಾಗಿ ಹಾಗೆಯೇ ಆತ್ಮಹತ್ಯೆಯನ್ನು ಹತ್ಯೆಯಾಗಿ ಹೇಳುವುದು, ಇಂತಹವು ಬಹಳ ಜನರಿಗೆ ಸಹಿಸಿಕೊಳ್ಳಲಾರದಂತಹ ವಿಪ್ಲವಾತ್ಮಕ ಹಾಗೂ ಸಂಚಲನ ವಿಷಯಗಳೆಷ್ಟೋ ಈ ಗ್ರಂಥದಲ್ಲಿ ಇವೆ. ಶ್ರೀಕೃಷ್ಣನ ಯಥಾರ್ಥ ಭಾವವನ್ನು ತಿಳಿಸಿ, ವಾಸ್ತವ ಜ್ಞಾನ ಪಥದಲ್ಲಿ ನಡೆಸಿ, ಮೋಕ್ಷಗಮ್ಯವನ್ನು ಸೇರಿಸುವುದು ಈ ಗ್ರಂಥ ರಾಜ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದೈವ ಗ್ರಂಥದಲ್ಲಿ ಸತ್ಯಾಸತ್ಯ ವಿಚಕ್ಷಣೆ

ದೈವಗ್ರಂಥದ ಹೆಸರು ಒಂದೇ ಆದರೂ ಗ್ರಂಥಗಳು ಮೂರು ಇವೆ. ಅವುಗಳನ್ನು ಹಳೆ ಭಾಷೆಯಲ್ಲಿ ಹೇಳಿದರೆ ತೌರಾತು, ಇಂಜೀಲು, ಖುರ್‌ಆನ್ ಗ್ರಂಥಗಳು ಎಂದು ಕರೆಯುತ್ತೇವೆ. ಮೂರು ಗ್ರಂಥಗಳನ್ನು ಮಾನವರು ಅರ್ಥ ಮಾಡಿಕೊಳ್ಳುವಂತೆ ಆಯಾ ಪ್ರಾಂತ ಮಾನವರಿಗೆ, ಆಯಾ ಪ್ರಾಂತ ಭಾಷೆಗಳಲ್ಲಿ ಮೂರು ಗ್ರಂಥಗಳು ಬರೆಯಲ್ಪಟ್ಟು ಮನುಷ್ಯರ ಹತ್ತಿರಕ್ಕೆ ಬಂದಿವೆ. ಈ ಮೂರು ಗ್ರಂಥಗಳನ್ನು ಹೊಸ ಭಾಷೆಯಲ್ಲಿ ಹೇಳಿದರೆ ಪ್ರಥಮ ದೈವಗ್ರಂಥವಾಗಿ ಬರೆಯಲ್ಪಟ್ಟು ಮೊದಲು ಮನುಷ್ಯರ ಹತ್ತಿರಕ್ಕೆ ಬಂದಿರುವುದು ಭಾರತದೇಶದಲ್ಲಿ ಭಗವದ್ಗೀತೆ. ನಂತರ ಮೂರು ಸಾವಿರ ವರ್ಷಗಳಿಗೆ ದ್ವಿತೀಯ ದೈವಗ್ರಂಥವಾಗಿ ಹೆಬ್ರೀಭಾಷೆಯಲ್ಲಿ ಬರೆಯಲ್ಪಟ್ಟಿರುವ ಬೈಬಲ್, ಇಜ್ರಾಯೇಲ್ ದೇಶದಲ್ಲಿ ತಯಾರಾಗಿದೆ. ನಂತರ ಆರುನೂರು ವರ್ಷಗಳಿಗೆ ಅಂತಿಮ ದೈವಗ್ರಂಥವಾಗಿ ಕೊನೆಯಲ್ಲಿ ಬರೆಯಲ್ಪಟ್ಟಿದೆ ಖುರ್‌ಆನ್ ಗ್ರಂಥ. ಖುರ್‌ಆನ್ ಗ್ರಂಥ ಅರಬ್ ದೇಶದಲ್ಲಿ ತಯಾರಾಗಿದೆ.

ಈದಿನ ಹಿಂದೂಮತ ಎಂದು ಹೇಳಿಕೊಳ್ಳುವವರು ಭಗವದ್ಗೀತೆಯನ್ನು, ಕ್ರೈಸ್ಥರು ಬೈಬಲ್ ಗ್ರಂಥವನ್ನು, ಮುಸ್ಲಿಮ್‌ರು ಖುರ್‌ಆನ್ ಗ್ರಂಥವನ್ನು ವಿಶ್ವಾಸಿಸುತ್ತಿದ್ದಾರೆ. ಆದರೆ ಕ್ರೈಸ್ಥರು ಬೈಬಲ್‌ನ್ನು, ಮುಸ್ಲಿಮ್‌ರು ಖುರ್‌ಆನ್‌ನನ್ನು ನೂರಕ್ಕೆ ನೂರರಷ್ಟು ವಿಶ್ವಾಸಿಸಿ ಓದಿಕೊಳ್ಳುವುದು ನಡೆಯುತ್ತಿದೆ. ಒಂದು ಹಿಂದೂಮತದಲ್ಲಿ ಮಾತ್ರ ಎಲ್ಲರೂ ಪೂರ್ತಿಯಾಗಿ ಭಗವದ್ಗೀತೆಯೇ ತಮ್ಮ ಗ್ರಂಥವೆಂದು ಅಂದುಕೊಳ್ಳುವವರು ಬಹಳ ಕಡಿಮೆ. ಕೆಲವರಿಗೆ ಭಗವದ್ಗೀತೆ ಎಂದರೇ ಏನೊ ಗೊತ್ತಿಲ್ಲ. ಕೆಲವರಿಗೆ ತಿಳಿದರೂ ಭಗವದ್ಗೀತೆ ಧರ್ಮಗಳನ್ನೇ ಆಚರಿಸಬೇಕೆನ್ನುವ ವಿಷಯ ಕೂಡಾ ತಿಳಿದಿಲ್ಲ. ಕೆಲವರಿಗೆ ಭಗವದ್ಗೀತೆ ಹಿಂದೂಗಳದ್ದೆಂದು ಕೂಡಾ ತಿಳಿದಿಲ್ಲ. ಚೆನ್ನಾಗಿ ತಿಳಿದಿರುವ ಪಂಡಿತರನ್ನು ಕೇಳಿದರೆ ಅವರು ಭಗವದ್ಗೀತೆ ಮೇಲೆ ಸ್ವಲ್ಪ ಅಸೂಯೆಹೊಂದಿ ಮಾತನಾಡುವುದು, ಭಗವದ್ಗೀತೆ ಎಲ್ಲರೂ ಓದುವ ಗ್ರಂಥ ಅಲ್ಲ ಎಂದು ಹೇಳುತ್ತಿದ್ದಾರೆ. ಹಿಂದೂಗಳು ವೇದಗಳನ್ನು ಓದಬೇಕೆಂದು, ವೇದಗಳೇ

ಹಿಂದೂಗಳ ಗ್ರಂಥಗಳೆಂದು ಕೆಲವರು ಹೇಳಿದಾಗ, ಮತ್ತೆ ಕೆಲವರು ವೇದಗಳನ್ನು ಶುಚಿಶುಭ್ರ ಇರುವವರೇ ಓದಬೇಕೆಂದು, ಎಲ್ಲರೂ ಓದಬಾರದೆಂದು ಕೂಡಾ ಹೇಳುತ್ತಿದ್ದಾರೆ. ಉಳಿದ ಎರಡು ಮತದವರಿಗೆ ಕ್ರೈಸ್ಥರು ಯೆಹೋವಾ ಎಂದೂ, ಮುಸ್ಲಿಮ್‌ರು ಅಲ್ಲಾಹ್ ಎಂದೂ ಒಂದೇ ದೇವರನ್ನು ಹೇಳುತ್ತಿದ್ದಾರೆ. ಹಿಂದೂಮತದಲ್ಲಿ ಹಿಂದೂಗಳಿಗೆ ಇಂತಹ ದೇವರೆಂದು ಹೇಳುವ ವಿಧಾನ ಕೂಡಾ ಇಲ್ಲ. ಹಿಂದೂಗಳಲ್ಲಿ ಅನೇಕ ದೇವರುಗಳ ಹೆಸರುಗಳನ್ನು ಹೇಳುತ್ತಿದ್ದಾರೆ. ಬಹು ದೇವತಾರಾಧನೆ ಹಿಂದೂಗಳ ಸನಾತನ ಧರ್ಮವೆಂದು ಹೇಳುತ್ತಿದ್ದಾರೆ. ಹಿಂದೂ ಮತ ಜನಸಂಖ್ಯೆಯಲ್ಲಿ ಅರ್ಧಕ್ಕಿಂತ ಹೆಚ್ಚು ದೇವರ ವಿಷಯವನ್ನು ಹಿಡಿಸಿಕೊಳ್ಳದೆ ಬದುಕುವವರಿದ್ದಾರೆ. ಅವರು ಯಾವುದನ್ನು ನೋಡದೆ ಅವರ ಕೆಲಸದಲ್ಲಿ ಅವರು ಲಗ್ನವಾಗಿ ಹೋಗುತ್ತಿದ್ದಾರೆ. ಅವರಿಗೆ ದೇವರಾಗಲಿ, ಭಕ್ತಿಯಾಗಲಿ ಏನು ಇರುವುದಿಲ್ಲ. ಉಳಿದ ಅರ್ಧ ಜನರಲ್ಲಿ ಸ್ವಲ್ಪ ಭಕ್ತಿ ಇದ್ದರೂ ಅದು ಗ್ರಾಮದೇವತೆಗಳ ಮೇಲೆಯೋ, ಸಾಧಾರಣ ದೇವತೆಗಳ ಮೇಲೆಯೋ ಇರುತ್ತದೆ. ಉಳಿದ ಕೆಲವರಿಗೆ ಭಾರತ, ಭಾಗವತ, ರಾಮಾಯಣ ಗ್ರಂಥಗಳನ್ನು ಓದುವ ಅಭ್ಯಾಸ ಇರುತ್ತದೆ. ಅವರಿಗೆ ಅದೇ ಭಕ್ತಿ, ಅದೇ ಜ್ಞಾನ. ಹಿಂದೂಗಳಲ್ಲಿ ಬಹಳ ಕಡಿಮೆಜನ ಭಗವದ್ಗೀತೆಯನ್ನು ನೋಡಿದವರು ಇದ್ದಾರೆ. ಅವರಲ್ಲಿ ಓದಿದವರು ಮತ್ತಷ್ಟು ಕಡಿಮೆ. ಓದಿದವರಲ್ಲಿ ಭಗವದ್ಗಗೀತೆಯನ್ನು ಅರ್ಥಮಾಡಿಕೊಂಡವರು ಕೆಲವು ಸಾವಿರಾರು ಜನರಲ್ಲಿ ಒಬ್ಬರು ಇಬ್ಬರು ಕೂಡಾ ಇಲ್ಲದಿರುವುದು ನೋಡಿದರೆ, ಭಗವದ್ಗೀತೆ ಹಿಂದೂಗಳಿಗೆ ಎಷ್ಟು ಅನುಬಂಧವಾಗಿ ಇದೆಯೊ ತಿಳಿದುಹೋಗುತ್ತಿದೆ.

ಉಳಿದ ಎರಡು ಮತದವರು ಅವರ ಗ್ರಂಥಗಳನ್ನು ಬಹಳ ದೊಡ್ಡದಾಗಿ ನೋಡಿಕೊಳ್ಳುತ್ತಿರುವಾಗ, ಹಿಂದೂಗಳು ಮಾತ್ರ ಅವರಂತೆ ಅಲ್ಲದೆ ಭಗವದ್ಗೀತೆಯನ್ನು ದೊಡ್ಡದಾಗಿ ಹೇಳಿಕೊಳ್ಳುವುದಾಗಲಿ, ಮಹೋನ್ನತವಾಗಿ ನೋಡಿಕೊಳ್ಳುವುದಾಗಲಿ, ದೊಡ್ಡದಾಗಿ ಭಾವಿಸಿಕೊಳ್ಳುವುದಾಗಲಿ ಇಲ್ಲವೆಂದು ಹೇಳಬಹುದು. ಯಾವ ಮತದಲ್ಲಿ ಇಲ್ಲದ ಭಕ್ತಿ ಭಾವನೆ ಹಿಂದೂಮತದಲ್ಲಿದ್ದರೂ

ಅದು ವಿಚಕ್ಷಣೆ ಇಲ್ಲದಿರುವುದಾಗಿ, ಲಾಭವಾ ನಷ್ಟವಾ ಎನ್ನುವ ಲೆಕ್ಕವಿಲ್ಲದ್ದಾಗಿ, ಮಾಡಬೇಕಾಗಿರುವುದಾ ಅಲ್ಲವಾ! ಎಂದು ಯಾವ ಆಲೋಚನೆ ಮಾಡದಿರುವುದಾಗಿದೆ. ಯಾರ ದಾರಿ ಅವರದೆನ್ನುವಂತೆ ಗುರುಗಳು ಸಹಿತ ಅನೇಕ ವಿಧಗಳಾಗಿ ಬೋಧಿಸುತ್ತಾ, ಒಂದು ದೇವರೆಂದು ನಿರ್ಧಾರಣೆ ಮಾಡದಂತೆ ಯಾರ ಇಷ್ಟಪ್ರಕಾರ ಅವರನ್ನು ಆರಾಧಿಸಬಹುದೆಂದು ಹೇಳುತ್ತಿದ್ದಾರೆ. ಭಗವದ್ಗೀತೆ ಎಷ್ಟೋ ಅತ್ಯುನ್ನತ ಜ್ಞಾನವನ್ನು ಹೊಂದಿರುವುದಾದರೂ, ಹಿಂದೂಗಳಿಗದು ಸರಿಯಾಗಿ ಅರ್ಥ ಆಗಲಿಲ್ಲವೆಂದೇ ಹೇಳಬಹುದು. ಉಳಿದ ಮತದವರು ಅವರ ಗ್ರಂಥಗಳ ಮೇಲೆ ಭಕ್ತಿಯನ್ನು ಪ್ರದರ್ಶಿಸುತ್ತಿದ್ದರೂ, ಹಿಂದೂಗಳಿಗೆ ಅರ್ಥವಾಗದಂತೇ ಅವರಿಗೂ ಕೂಡಾ ಅರ್ಥವಾಗಲಿಲ್ಲವೆಂದು ಹೇಳಬಹುದು. ಭಕ್ತಿ ವಿಶ್ವಾಸಗಳಿದ್ದರೂ ಗ್ರಂಥದಲ್ಲಿನ ಜ್ಞಾನ ಉಳಿದ ಮತದವರಿಗೆ ಅರ್ಥವಾಗದೆ ಹೋದರೆ, ಭಗವದ್ಗೀತಾ ಗ್ರಂಥದ ಮೇಲೆ ಭಕ್ತಿ ವಿಶ್ವಾಸಗಳು ಇಲ್ಲದೆ ಹಿಂದೂಗಳಿಗೆ ಅರ್ಥವಾಗಲಿಲ್ಲ. ಒಟ್ಟಿನಲ್ಲಿ ಹಿಂದೂ, ಕ್ರೈಸ್ಥವ, ಮುಸ್ಲಿಮ್ ಎನ್ನುವ ಮೂರು ಮತದವರಿಗು ಮೂರು ಗ್ರಂಥಗಳು ಅರ್ಥ ಆಗಲಿಲ್ಲವೆಂದೇ ಹೇಳಬಹುದು. ಆದರೂ ಮೂರು ಮತದವರು ತಮಗೆ ತಮ್ಮ ಗ್ರಂಥಗಳು ಅರ್ಥವಾಗಿವೆಯೆಂದು ಅಂದುಕೊಳ್ಳುತ್ತಿದ್ದಾರೆ.

**1) ಪ್ರಶ್ನೆ :– ಮೂರು ಮತಗಳು ಇವೆ ಸರಿ! ಅವರಲ್ಲಿ ಹಿಂದೂಗಳಿಗೆ ಭಗವದ್ಗೀತೆ, ಕ್ರೈಸ್ಥರಿಗೆ ಬೈಬಲ್, ಮುಸ್ಲಿಮ್‌ರಿಗೆ ಖುರ್ಆನ್ ಗ್ರಂಥ ಎಂದು ನೀವು ಹೇಳುವ ಮಾತುಗಳಲ್ಲಿ ಅರ್ಥವಾಗಿದೆ. ಇಂತಹ ಮತದವರಿಗೆ ಇಂತಹ ಗ್ರಂಥವೆಂದು ದೇವರು ಏರ್ಪಡಿಸಿ ಕೊಟ್ಟಿದ್ದಾನಾ?**

**ಉತ್ತರ :–** ಯಾವ ಮತಕ್ಕು ಪ್ರತ್ಯೇಕವಾಗಿ ಯಾವ ಗ್ರಂಥವನ್ನು ದೇವರು ಕೊಡಲಿಲ್ಲ. ಆದರೂ ಕ್ರೈಸ್ಥರು ತಮ್ಮದು ಬೈಬಲ್ ಎಂದು ಹೇಳುತ್ತಿದ್ದಾರೆ. ಮುಸ್ಲಿಮ್‌ರು ತಮ್ಮ ಗ್ರಂಥ ಖುರ್ಆನ್ ಗ್ರಂಥವೆಂದು ಹೇಳುತ್ತಿದ್ದಾರೆ. ಕೊನೆಗೆ ಉಳಿದ ಭಗವದ್ಗೀತೆಯನ್ನು ತಮ್ಮದೆಂದು ಹಿಂದೂಗಳು ಹೇಳುತ್ತಿದ್ದಾರೆ. ಕ್ರೈಸ್ಥರು, ಮುಸ್ಲಿಮ್‌ರು ಅವರ ಗ್ರಂಥಗಳನ್ನು ಹೇಳಿಕೊಂಡರೆ ಕೊನೆಯಲ್ಲಿ ಉಳಿದುಹೋದ

ಭಗವದ್ಗೀತೆಯನ್ನು ತಮ್ಮ ಗ್ರಂಥವೆಂದು ಹಿಂದೂಗಳು ಹೇಳುವುದಾಗಿದೆ. ಈ ವಿಧವಾಗಿ ಮೂರು ಮತದವರು ಮೂರು ಗ್ರಂಥಗಳನ್ನು ಹೇಳಿಕೊಳ್ಳುತ್ತಿದ್ದಾರೆ. ಅಷ್ಟೇ ಹೊರತು ದೇವರು ಯಾರೊಂದಿಗೂ ಈ ಗ್ರಂಥ ಕ್ರೈಸ್ಥರದೆಂದು ಹೇಳುವುದಾಗಲಿ, ಖುರ್‌ಆನ್ ಮುಸ್ಲಿಮ್‌ರದೆಂದು ಹೇಳುವುದಾಗಲಿ, ಭಗವದ್ಗೀತೆ ಹಿಂದೂಗಳದ್ದೆಂದಾಗಲಿ ಹೇಳಲಿಲ್ಲ. ಮನುಷ್ಯರೇ ಯಾರಿಷ್ಟಕ್ಕವರು ಅವರ ಹಿರಿಯರು ಅನುಸರಿಸಿದಂತೆ ಅನುಸರಿಸುತ್ತಾ ಅದನ್ನೇ ತಮ್ಮದೆಂದು ಹೇಳಿಕೊಳ್ಳುತ್ತಿದ್ದಾರೆ.

ಯೇಸು ಹುಟ್ಟಿದಾಗಲೇ ನಾಲ್ಕು ಸುವಾರ್ತೆಗಳು ಹುಟ್ಟಿವೆ. ಆ ನಾಲ್ಕು ಸುವಾರ್ತೆಗಳು ಬೈಬಲ್ ಗ್ರಂಥದಲ್ಲಿ ಸೇರಿಸಲ್ಪಟ್ಟಿವೆ. ಯೇಸು ಜೀವನ ಚರಿತ್ರೆಯೊಂದಿಗೆ ಸಂಬಂಧವಿರುವ ನಾಲ್ಕು ಸುವಾರ್ತೆಗಳಿರುವುದರಿಂದ, ಅಲ್ಲಿಂದಲೇ ಕ್ರೈಸ್ಥರು ಏರ್ಪಡುವುದರಿಂದ, ನಾಲ್ಕು ಸುವಾರ್ತೆಗಳಿರುವ ಒಟ್ಟಾರೆ ಬೈಬಲ್ ಕ್ರೈಸ್ಥರಿಗೆ ಅಭ್ಯಾಸವಾಗಿಹೋಗಿದೆ. ಹಾಗೆಯೇ ಮುಹಮ್ಮದ್ ಪ್ರವಕ್ತ ಮೂಲಕ ತಿಳಿದಿರುವುದು ಖುರ್‌ಆನ್ ಗ್ರಂಥ. ಮುಹಮ್ಮದ್ ಪ್ರವಕ್ತನಿಂದ ಪ್ರಾರಂಭವಾದ ಖುರ್‌ಆನ್ ಗ್ರಂಥಕ್ಕೆ ಮುಸ್ಲಿಮ್‌ರು ಅಭ್ಯಾಸವಾಗಿದ್ದಾರೆ. ಹಾಗೆಯೇ ಮೊದಲೇ ತಯಾರಾದ ಭಗವದ್ಗೀತೆಯನ್ನು ಹಿಂದೂಗಳ ಗ್ರಂಥವೆಂದು ಹೇಳಿಕೊಳ್ಳುವುದು ನಡೆದಿದೆ. ಈ ವಿಧವಾಗಿ ಮೂರು ಮತದವರಿಗೆ ಮೂರು ಗ್ರಂಥಗಳು ಅಭ್ಯಾಸವಾಗಿಹೋಗಿವೆ. ಇಂತಹ ಗ್ರಂಥ ಇಂತಹ ಮತಕ್ಕೆ ಎಂದು ದೇವರು ಮನುಷ್ಯರಿಗೆ ಹೇಳಲಿಲ್ಲ. ಮನುಷ್ಯ ತನ್ನ ಇಷ್ಟಬಂದಂತೆ ಇದು ತಮ್ಮ ಮತವೆಂದು, ಮತ್ತೊಂದು ಇತರರ ಮತವೆಂದು ನಿರ್ಣಯಿಸಿಕೊಂಡಿದ್ದಾನೆ. ಹಾಗೆ ಗ್ರಂಥಗಳನ್ನು ಏರ್ಪಡಿಸಿಕೊಂಡಿದ್ದಾನೆ.

**2) ಪ್ರಶ್ನೆ :– ವಿಚಕ್ಷಣಾ ಜ್ಞಾನ ಎಂದರೇ ಏನು?**

**ಉತ್ತರ :–** ಮನುಷ್ಯ ನನ್ನದು ಇಂತಹ ಮತ ಎನ್ನುವ ವಿಚಕ್ಷಣೆ ಹೊಂದಿರುವಾಗ ನನ್ನ ಮತ ಗ್ರಂಥ ಇಂತಹದೆನ್ನುವ ವಿಚಕ್ಷಣೆ ಕೂಡಾ ಇರುತ್ತದೆ. ಮುಸ್ಲಿಮ್‌ರಿಗೆ ಭಗವದ್ಗೀತೆಯನ್ನು ತೋರಿಸಿದರೂ, ಇಲ್ಲವೆ ಬೈಬಲ್‌ನನ್ನು ತೋರಿಸಿದರೂ

ಇದು ನಮ್ಮ ಗ್ರಂಥ ಅಲ್ಲವೆಂದು, ನಮ್ಮ ಗ್ರಂಥ ಖುರ್‌ಆನ್ ಎಂದು ಹೇಳುತ್ತಾನೆ. ಆತನಿಗೆ ನಾನು ಮುಸ್ಲಿಮ್ ಎನ್ನುವ ಧ್ಯಾಸ ಇರುವುದಲ್ಲದೆ, ಗ್ರಂಥವನ್ನು ನೋಡಿದಾಗ ತನಗಿರುವ ವಿಚಕ್ಷಣೆಯಿಂದ ಇದು ಇಂತಹ ಮತದವರದ್ದೆಂದು, ನನ್ನ ಮತಕ್ಕೆ ಸಂಬಂಧಿಸಿದ ಗ್ರಂಥ ಅಲ್ಲವೆಂದು ಗುರುತಿಸುತ್ತಿದ್ದಾನೆ. ಇದು ಹೌದು, ಇದು ಅಲ್ಲ ಎನ್ನುವ ವಿವರವನ್ನು ತಿಳಿಯುವುದೇ **ವಿಚಕ್ಷಣೆ** ಎಂದು ಹೇಳುತ್ತಿದ್ದೇವೆ. ಇನ್ನೂ ವಿವರವಾಗಿ ಹೇಳಿಕೊಂಡರೆ ಮನೆಯಲ್ಲಿ ನಿವಾಸಿಸುವ ಮನುಷ್ಯರನ್ನು ಇಂತಹ ಮನುಷ್ಯಳು ನನ್ನ ಹೆಂಡತಿ, ಇಂತಹವರು ನನ್ನ ತಾಯಿ, ತಂದೆ, ಇಂತಹವರು ನನ್ನ ಮಕ್ಕಳು, ಇಂತಹವರು ನನ್ನ ಅಣ್ಣತಮ್ಮಂದಿರು ಎಂದು ಬೇರ್ಪಡಿಸಿ ತಿಳಿಯುವುದೇ ವಿಚಕ್ಷಣಾಶಕ್ತಿ ಇಲ್ಲವೆ ವಿಚಕ್ಷಣಾ ಜ್ಞಾನ ಎಂದು ಕರೆಯುತ್ತೇವೆ. ಮನುಷ್ಯನಲ್ಲಿನ ವಿಚಕ್ಷಣಾ ಜ್ಞಾನ ಎನ್ನುವುದು ಒಂದು ಕುಟುಂಬದಲ್ಲಿನ ಮನುಷ್ಯರನ್ನಲ್ಲದೇ, ಹೊರಗಿನ ಮನುಷ್ಯರನ್ನಾಗಲಿ, ಹೊರಗಿನ ವಸ್ತುಗಳನ್ನಾಗಲಿ, ಗ್ರಂಥಗಳನ್ನಾಗಲಿ, ಗ್ರಂಥದಲ್ಲಿನ ವಿಷಯವನ್ನಾಗಲಿ, ಬೇರೆಬೇರೆಯಾಗಿ ತಿಳಿದು ಅವುಗಳಲ್ಲಿರುವ ಸ್ವಲ್ಪಮಟ್ಟಿನ ವ್ಯತ್ಯಾಸವನ್ನು ಕೂಡಾ ಗುರುತಿಸುವುದನ್ನು **ವಿಚಕ್ಷಣೆ** ಎಂದು ಕರೆಯುತ್ತೇವೆ. ಹಣದ ವಿಷಯಕ್ಕೆ ಬಂದರೆ ನೂರು ರೂಪಾಯಿಗಳ ನೋಟನ್ನು, ಐದುನೂರು ರೂಪಾಯಿಗಳ ನೋಟನ್ನು, ಸಾವಿರರೂಪಾಯಿಗಳ ನೋಟನ್ನು ಯಾವ ಗೊಂದಲವಿಲ್ಲದೆ ಗುರುತಿಸುತ್ತಿದ್ದೇವೆ. ಹಾಗೆ ಅವುಗಳಲ್ಲಿರುವ ವ್ಯತ್ಯಾಸವನ್ನು ಗುರುತಿಸಿ ಸುಲಭವಾಗಿ ಹಣವನ್ನು ಗುರುತಿಸುತ್ತಿದ್ದೇವೆ. ಒಂದುವೇಳೆ ಹತ್ತು, ಐದುನೂರು ರೂಪಾಯಿಗಳ ನೋಟುಗಳಲ್ಲಿ ಒಂದು ಕಳ್ಳನೋಟು ಬೆರೆತುಬಂದರೂ, ಒರಿಜಿನಲ್ ನೋಟಿಗು ಡೂಪ್ಲಿಕೇಟ್ ನೋಟಿಗು ಗುರುತಿಸಲಾರದ ಚಿಕ್ಕ ವ್ಯತ್ಯಾಸವನ್ನು ಕೂಡಾ ಗುರುತಿಸಿ, ಇದು ಕಳ್ಳನೋಟು ಎಂದು ಹೇಳುವುದನ್ನೇ ಮನುಷ್ಯನಿಗಿರುವ ವಿಚಕ್ಷಣಾ ಜ್ಞಾನ ಎನ್ನುತ್ತೇವೆ.

3)**ಪ್ರಶ್ನೆ :– ಪ್ರಾಣಿಗಳಲ್ಲಿ ವಿಚಕ್ಷಣಾ ಜ್ಞಾನ ಇರುತ್ತದಾ?**

**ಉತ್ತರ :–** ಇರುತ್ತದೆಂದೇ ಹೇಳಬಹುದು. ಏಕೆಂದರೇ! ಪ್ರಾಣಿಗಳಾದರೂ

ಅವು ಅವುಗಳ ಮರಿಗಳನ್ನು ಗುರುತು ಹಿಡಿಯುತ್ತಿವೆ. ಹಾಗೆಯೇ ಮರಿಗಳು ತಾಯಂದಿರನ್ನು ಗುರುತು ಹಿಡಿಯುತ್ತಿವೆ. ವಿಚಕ್ಷಣಾ ಜ್ಞಾನ ಇಲ್ಲದ್ದು ಅವು ಒಂದಕ್ಕೊಂದು ಹೇಗೆ ಗುರುತು ಹಿಡಿಯಬಲ್ಲವು? ಹಸಿಹುಲ್ಲನ್ನು ನೋಡಿದರೆ ರುಚಿಕರವಾದ ಆಹಾರವೆಂದು ಗುರುತು ಹಿಡಿಯುತ್ತವೆ.

**4) ಪ್ರಶ್ನೆ :– ಮನುಷ್ಯನನ್ನು ಪ್ರಾಣಿಯನ್ನು ಹೋಲಿಸಿ ನೋಡಿದರೆ ಯಾವುದಕ್ಕೆ ವಿಚಕ್ಷಣಾ ಶಕ್ತಿ ಹೆಚ್ಚಾಗಿರುತ್ತದೆ?**

**ಉತ್ತರ :–** ವಿಚಕ್ಷಣಾ ಶಕ್ತಿ ಎನ್ನುವುದು ಅವಶ್ಯಕತೆಯನ್ನನುಸರಿಸಿ, ಜೀವಿಯ ವಿಧಾನವನ್ನು ಅನುಸರಿಸಿ ಪ್ರಾಣಿಗಳಿಗಾಗಲಿ, ಮನುಷ್ಯರಿಗಾಗಲಿ ಜೋಡಣೆಯಾಗಿರುತ್ತದೆ. ಕೆಲವು ಸಂದರ್ಭಗಳಲ್ಲಿ, ಕೆಲವು ವಿಷಯಗಳಲ್ಲಿ ಮನುಷ್ಯರಿಗಿಂತ ಪ್ರಾಣಿಗಳಿಗೇ ಹೆಚ್ಚಾಗಿ ವಿಚಕ್ಷಣೆ ಇರುತ್ತದೆ. ಹಾಗೇ ಕೆಲವು ವಿಷಯಗಳಲ್ಲಿ ಮಾತ್ರ ಪ್ರಾಣಿಗಳಿಗಿಂತ ಮನುಷ್ಯರಲ್ಲಿ ಹೆಚ್ಚಾಗಿ ವಿಚಕ್ಷಣೆ ಇರುತ್ತದೆ. ಮನುಷ್ಯರಿಗೆ ಹೆಚ್ಚು ವಿಷಯಗಳಿರುವಾಗ, ಪ್ರಾಣಿಗಳಿಗೆ ಕಡಿಮೆ ವಿಷಯಗಳಿರುತ್ತವೆ. ಒಬ್ಬ ಮನುಷ್ಯನಲ್ಲಿ ಕಡಿಮೆ ಮತ್ತೊಬ್ಬ ಮನುಷ್ಯನಲ್ಲಿ ಹೆಚ್ಚು ವಿಚಕ್ಷಣಾ ಶಕ್ತಿ ಇರುವಂತೆ ಪ್ರಾಣಿಗಳಲ್ಲಿ ಕೂಡಾ ಒಂದಕ್ಕು ಮತ್ತೊಂದಕ್ಕು ವ್ಯತ್ಯಾಸ ಇರುತ್ತದೆ.

**5) ಪ್ರಶ್ನೆ :– ಪ್ರಾಣಿಗೆ ಒಂದು ವಿಧ, ಮನುಷ್ಯರಿಗೆ ಮತ್ತೊಂದು ವಿಧವಾಗಿ ವಿಚಕ್ಷಣೆ ಇರುವುದಕ್ಕೆ ಕಾರಣವೇನು? ಮನುಷ್ಯರಲ್ಲಾಗಲಿ ಪ್ರಾಣಿಗಳಿಗಾಗಲಿ ಒಂದೇ ವಿಧವಾದ ವಿಚಕ್ಷಣೆ ಏಕೆ ಇಲ್ಲ?**

ಉತ್ತರ :– ವಿಚಕ್ಷಣಾ ಶಕ್ತಿ ಇಲ್ಲವೆ ವಿಚಕ್ಷಣಾ ಜ್ಞಾನ ಮನುಷ್ಯರಿಗಾಗಲಿ, ಪ್ರಾಣಿಗಳಿಗಾಗಲಿ ಪ್ರಪಂಚ ಸಂಬಂಧ, ಪರಮಾತ್ಮ ಸಂಬಂಧವೆಂದು ಎರಡು ವಿಧಗಳು ಇರುತ್ತದೆ. ಪ್ರಪಂಚ ಸಂಬಂಧವಾದುದು ಕರ್ಮವನ್ನನುಸರಿಸಿ ಇರುತ್ತದೆ. ಪರಮಾತ್ಮ ಸಂಬಂಧವಾದುದು ಅವರ ಶ್ರದ್ಧೆಯನ್ನನುಸರಿಸಿ ಇರುತ್ತದೆ. ಮನುಷ್ಯನಿಗಾಗಲಿ ಪ್ರಾಣಿಗಾಗಲಿ ಪ್ರಪಂಚ ಸಂಬಂಧ ವಿಚಕ್ಷಣಾ ಶಕ್ತಿ ಅವರವರ ಕರ್ಮವನ್ನನುಸರಿಸಿ ಇರುತ್ತದೆ. ಅದೇ ದೈವಿಕವಾದುದಾದರೆ ಮನುಷ್ಯನಿಗೆ

ದೇವರಮೇಲಿರುವ ಶ್ರದ್ಧೆಯನ್ನನುಸರಿಸಿ ಲಭ್ಯವಾಗಿರುತ್ತದೆ. ಪ್ರಪಂಚ ಸಂಬಂಧವಾದ ಅನೇಕ ವಿಷಯಗಳಲ್ಲಿ ಅನೇಕ ವಿಧಗಳಾಗಿ ವಿಚಕ್ಷಣೆ ಇರುವುದಕ್ಕೆ ಮುಖ್ಯವಾಗಿ ಕರ್ಮವೇ ಕಾರಣ. ಕರ್ಮದಿಂದ ಮನುಷ್ಯನಿಗೆ ಎಷ್ಟು ವಿಚಕ್ಷಣೆ ಇರಬೇಕೊ ಅಷ್ಟೇ ಲಭ್ಯವಾಗುತ್ತದೆ. ದೈವ ವಿಷಯಗಳಲ್ಲಿ ದೇವರಮೇಲೆ ಶ್ರದ್ಧೆಯಿಂದಾದರೂ, ದೇವರ ಜ್ಞಾನದ ಮೇಲೆ ಶ್ರದ್ಧೆಯನ್ನನುಸರಿಸಿಯಾದರೂ ವಿಚಕ್ಷಣಾ ಶಕ್ತಿಯನ್ನು ದೇವರೇ ಮನುಷ್ಯನಿಗೆ ಕೊಟ್ಟಿರುತ್ತಾನೆ. ಇಲ್ಲಿ ದೇವರು ಕೊಟ್ಟಿದ್ದಾನೆಂದು ದೇವರ ಗೌರವಾರ್ಥ ಹೇಳುತ್ತಿದ್ದೇವೆ ಹೊರತು, ದೇವರು ಏನು ಕೊಡುವವನಲ್ಲ. ಶರೀರದಲ್ಲಿ ಜೀವಾತ್ಮವನ್ನು ನಡೆಸುತ್ತಿರುವ ಆತ್ಮವೇ ಮನುಷ್ಯನಿಗೆ ವಿಚಕ್ಷಣಾ ಶಕ್ತಿಯನ್ನು ಕೊಡುತ್ತಿದೆ. ಆತ್ಮ ಕೊಟ್ಟಿರುವ ವಿಚಕ್ಷಣೆಯನ್ನನುಸರಿಸಿ ಮನುಷ್ಯನಿಗೆ ಆತ್ಮ ವಿಷಯಗಳು ತಿಳಿಯುತ್ತವೆ. ಆಧ್ಯಾತ್ಮಿಕ ವಿಷಯಗಳನ್ನು ವಿವರವಾಗಿ ಯೋಚಿಸುವ ವಿಚಕ್ಷಣಾ ಬುದ್ಧಿಯನ್ನು ಆತ್ಮವೇ ಕೊಡುವುದರಿಂದ ಆತ್ಮಜ್ಞಾನ ಮನುಷ್ಯನಿಗೆ ಸಾಧ್ಯವಾಗುತ್ತಿದೆ. ಕೆಲವರಿಗೆ ಸಾಧ್ಯವಾಗದಂತಿದೆ.

**6) ಪ್ರಶ್ನೆ :– ಪ್ರಪಂಚ ವಿಷಯಗಳಲ್ಲಿ ವಿಚಕ್ಷಣೆಯ ವ್ಯತ್ಯಾಸ ಹೇಗೆ ತಿಳಿಯುತ್ತದೆ?**

**ಉತ್ತರ :–** ಒಬ್ಬನಿಗೆ ಒಳ್ಳೆಯದಾಗಿ ಕಾಣಿಸಿರುವುದು ಇನ್ನೊಬ್ಬನಿಗೆ ಕೆಟ್ಟದಾಗಿ ಕಾಣಿಸಿದೆಯೆಂದುಕೋ, ಆಗ ಇಬ್ಬರ ಮನುಷ್ಯರಲ್ಲಿ ವಿಚಕ್ಷಣಾ ಜ್ಞಾನ ಹೆಚ್ಚು ಕಡಿಮೆ ಇದ್ದಂತಲ್ಲವೆ! ಒಬ್ಬನು ಒಂದು ವಿಷಯವನ್ನು ನ್ಯಾಯವೆಂದರೇ ಮತ್ತೊಬ್ಬನು ಅದೇ ವಿಷಯವನ್ನೇ ಅನ್ಯಾಯವೆನ್ನುತ್ತಾನೆಂದುಕೊ, ಆಗ ಅವರಿಬ್ಬರಲ್ಲಿ ಅಭಿಪ್ರಾಯ ಭೇದಗಳು ಕಾಣಿಸುತ್ತಿವೆ ಅಲ್ಲವೆ! ಆಗ ಅವರಲ್ಲಿ ವಿಚಕ್ಷಣೆ ಬೇರೆಬೇರೆಯಾಗಿ ಇರುವುದರಿಂದ ಒಬ್ಬೊಬ್ಬರಿಗೆ ಒಂದೊಂದು ವಿಧವಾಗಿ ಅರ್ಥವಾಗಿರುವುದರಿಂದ ಹಾಗೆ ಅಭಿಪ್ರಾಯ ಭೇದಗಳು ಬಂದಿವೆಯೆಂದು ಹೇಳಬಹುದು. ಒಬ್ಬರು ಹೇಳುವ ವಿಷಯವನ್ನು ಕೇಳಿದರೂ ಅದರಲ್ಲಿನ ಭಾವನೆಯನ್ನು ಗ್ರಹಿಸಿಕೊಳ್ಳದ ಬಲಹೀನ ಬುದ್ಧಿ ಇರುವವರು, ಅವರ ಬುದ್ಧಿಗಿರುವ ಬಲವನ್ನನುಸರಿಸಿ ಆಲಿಸುವ ವಿಷಯ ಅರ್ಥ

ಮಾಡಿಕೊಳ್ಳಬಲ್ಲರು. ಆಗ ಅವರಿಗೆ ಅರ್ಥವಾಗಿರುವುದೇ ಸತ್ಯವೆಂದು ಅಂದುಕೊಳ್ಳುತ್ತಿರುತ್ತಾರೆ. ಅವರು ಸತ್ಯ ಎಂದುಕೊಂಡಷ್ಟು ಮಾತ್ರಕ್ಕೆ ಅದು ಸತ್ಯವಲ್ಲ!

ಯಥಾರ್ಥ ಸಂಘಟನೆ ಒಂದು ನಿನಗೆ ಅರ್ಥವಾಗುವುದಕ್ಕೆ ಹೇಳುತ್ತೇನೆ. ನಾನು ಆಧ್ಯಾತ್ಮಿಕ ಸಿದ್ಧಾಂತಕರ್ತನು. ಶಂಕರಾಚಾರ್ಯರವರು ಅದ್ವೈತ ಸಿದ್ಧಾಂತವನ್ನು, ರಾಮಾನುಜಾಚಾರ್ಯರವರು ವಿಶಿಷ್ಟಾದ್ವೈತವನ್ನು, ಮಧ್ವಾಚಾರ್ಯರವರು ದ್ವೈತವನ್ನು ಪ್ರಕಟಿಸಿದಂತೆ ನಾನು ಸ್ವತಃವಾಗಿ ಲೋಕಕ್ಕೆ ತಿಳಿಯದ ತ್ರೈತ ಸಿದ್ಧಾಂತವನ್ನು ಪ್ರಕಟಿಸಿದ್ದೇನೆ. ಆದ್ದರಿಂದ ನನ್ನನ್ನು ಎಲ್ಲರೂ ತ್ರೈತ ಸಿದ್ಧಾಂತಕರ್ತ ಎಂದು ಶಂಕರಾಚಾರ್ಯರನ್ನು, ರಾಮಾನುಜಾಚಾರ್ಯ ರನ್ನು, ಮಧ್ವಾಚಾರ್ಯರನ್ನು ಕರೆದಂತೆ ಕರೆಯುತ್ತಿರುತ್ತಾರೆ. ಅಷ್ಟೇ ಅಲ್ಲದೆ ನಮ್ಮ ರಚನಾ ಗ್ರಂಥಗಳ ಮೇಲೆ ಇಂತಹ ವ್ಯಕ್ತಿ ಬರೆದಿದ್ದಾನೆಂದು ತಿಳಿಯುವುದಕ್ಕೆ ನನ್ನ ಹೆಸರಿನ ಮುಂದೆ ತ್ರೈತ ಸಿದ್ಧಾಂತ ಆದಿಕರ್ತ ಎಂದು ಬರೆಯುವುದು ನಡೆದಿದೆ. ಆದರೆ ಕೆಲವರು ಅಸೂಯೆ ಹೊಂದಿದವರು ಉಳಿದ ಸಿದ್ಧಾಂತಕರ್ತರ ಫೋಟೋ ಪಕ್ಕದಲ್ಲಿ ನನ್ನ ಫೋಟೋವನ್ನು ನೋಡಲಾರದೆ, ದ್ವೇಷದಿಂದ ನನ್ನನ್ನು ದೂಷಿಸುವ ಧೋರಣಿಯಲ್ಲಿ "ಶಂಕರಾಚಾರ್ಯ, ಮಧ್ವಾಚಾರ್ಯರ ರಂತಹವನಾ ನೀನು?" ಎಂದು ಮಾತನಾಡುವುದು ನಡೆದಿದೆ. ಅಂತಹವರಿಗೆ ನಾವು ಲೆಕ್ಕವಿಲ್ಲದಿರುವಾಗ ನಮ್ಮನ್ನು ದೊಡ್ಡದಾಗಿ ಲೆಕ್ಕಿಸುವ ವೀರಬ್ರಹ್ಮಯ್ಯನವರ ಹೆಸರು ಹೇಳಿ ಆತನು ಸ್ವತಃವಾಗಿ ನನ್ನನ್ನು **"ಸಿದ್ಧಾಂತ ಶಿರೋಮಣಿ"** ಎಂದು ಹೇಳಿದ್ದಾನೆ. ಹಾಗಿರುವಾಗ ನಿಮ್ಮ ಲೆಕ್ಕದಲ್ಲಿ ನಾನು ಸಿದ್ಧಾಂತಕರ್ತನು ಅಲ್ಲದಿದ್ದರೂ, ಬ್ರಹ್ಮಯ್ಯನವರ ಲೆಕ್ಕದಲ್ಲಿ ಸಿದ್ಧಾಂತಕರ್ತನೇ ಎಂದು ಹೇಳುವುದಾಗಿದೆ. ಅಲ್ಲಿ ನನ್ನನ್ನು ವಿಮರ್ಶಿಸಿದವರನ್ನು ಉದ್ದೇಶಿಸಿ ನಾನು ಹೇಳಿದಾಗ, ಅದನ್ನು ಸಂದರ್ಭಾನುಸಾರ ಗ್ರಹಿಸಿಕೊಳ್ಳದವರು ನನ್ನನ್ನು ವಿಮರ್ಶಿಸುತ್ತಾ ಅಂದರೇ ಬೆರಳೆತ್ತಿ ತೋರಿಸುತ್ತಾ ಹೀಗೆ ಹೇಳಿದ್ದಾರೆ. "ಪ್ರಬೋಧಾನಂದಸ್ವಾಮಿ ತನ್ನ ಪುಸ್ತಕಗಳ ಪ್ರಚಾರ ಸಲುವಾಗಿ ಬ್ರಹ್ಮಯ್ಯನವರ

ರೆಕಮಂಡೇಷನ್‌ಗಾಗಿ ಪರದಾಡಿದಂತೆ ಕಾಣಿಸುತ್ತದೆ. ಅದು ಓದುಗರಿಗೆ ಗಿಡದ ಹೆಸರು ಹೇಳಿ ಕಾಯಿಗಳನ್ನು ಮಾರುವ ವಿಧವಾಗಿ ಬೇಸರ ತರಿಸುತ್ತದೆ. ಕೆಲವು ಧ್ವನಿ ಸಾರೂಪ್ಯತೆಯ ಪದಗಳಿಂದ ಉದಾಹರಣೆಯಾಗಿ ತೋರಿಸಿ ಬ್ರಹ್ಮಯ್ಯನವರು ಪ್ರಬೋಧಾನಂದನನ್ನು ಕುರಿತೇ ಹೇಳಿದ್ದಾನೆಂದು ಹೇಳುವುದಕ್ಕೆ ಪ್ರಯತ್ನಿಸುವುದು ಓದುಗರಿಗೆ ಆತಂಕವಾಗಿರುತ್ತದೆ" ಎಂದು ಹೇಳಿದ್ದಾನೆ. ಇದು ನೋಡಿದ ನಂತರ ಈತನಿಗೆ ವಿಚಕ್ಷಣೆ ಇಲ್ಲವೆಂದು ನನಗೆ ತಿಳಿದುಹೋಗಿದೆ. ಒಂದು ಸಂದರ್ಭದಲ್ಲಿ ಬ್ರಹ್ಮಯ್ಯನವರು ನನ್ನ ಹೆಸರು, ನನ್ನ ಊರಿನ ಹೆಸರು, ನನ್ನ ಕುಲದ ಹೆಸರಿನಿಂದ ಸಹ ಬರೆದಿದ್ದರೂ ಅದು ಅರ್ಥವಾಗದಿರುವುದು, ನನ್ನನ್ನು ವಿಮರ್ಶಿಸುವುದು, ನಾನು ಇತರರ ರೆಕಮಂಡೇಷನ್‌ಗಾಗಿ ಪರದಾಡಿದಂತೆ ಹೇಳುವುದು ನೋಡಿದರೆ, ವಿಚಕ್ಷಣಾ ಲೋಪವೆಂದು ತಪ್ಪದೇ ಅಂದುಕೊಳ್ಳಬೇಕಾಗಿದೆ. ನಾನು ಯಾವ ಸಂದರ್ಭದಲ್ಲಿ ಬ್ರಹ್ಮಯ್ಯನವರ ಪ್ರಸ್ಥಾವನೆ ತಂದಿದ್ದೀನೊ ಆತನಿಗೆ ಅರ್ಥವಾಗಲಿಲ್ಲ. ಈ ವಿಧವಾಗಿ ಕೆಲವರ ಮನುಷ್ಯರಲ್ಲಿ ವಿಚಕ್ಷಣಾ ಲೋಪ ಹೆಚ್ಚಾಗಿರುತ್ತದೆ. ಕೆಲವರಲ್ಲಿ ಕಡಿಮೆಯಾಗಿರುತ್ತದೆ. ಇದೆಲ್ಲವೂ ಅವರ ಕರ್ಮವನ್ನನುಸರಿಸಿ ಬುದ್ಧಿಗಿರುವ ಗ್ರಹಿಸುವ ಶಕ್ತಿಯಲ್ಲಿ ವ್ಯತ್ಯಾಸಗಳಿರುತ್ತವೆ. ಅದನ್ನೇ ವಿಚಕ್ಷಣೆಯಲ್ಲಿ ವ್ಯತ್ಯಾಸಗಳೆಂದು ಹೇಳಬಹುದು. ವಿಚಕ್ಷಣೆಯಿಂದಲೇ ಇತರರಲ್ಲಿರುವ ಸತ್ಯವನ್ನಾಗಲಿ, ಅಸತ್ಯವನ್ನಾಗಲಿ ತಿಳಿಯಬಹುದು.

**7) ಪ್ರಶ್ನೆ :- ಮನುಷ್ಯನಿಗೆ ಇರುವ ಬುದ್ಧಿ ಸಾಮರ್ಥ್ಯವನ್ನೇ, ಗ್ರಹಿಸಿಕೊಳ್ಳುವ ಶಕ್ತಿ ಸಾಮರ್ಥ್ಯವನ್ನೇ ವಿಚಕ್ಷಣಾಶಕ್ತಿ ಎನ್ನುತ್ತಿದ್ದೇವೆ ಅಲ್ಲವೆ! ಅದು ಪ್ರಪಂಚ ವಿಷಯಗಳಲ್ಲಿ ಕೆಲಸ ಮಾಡಿದಂತೆ ದೈವಿಕವಾದ ಪರಮಾತ್ಮ ವಿಷಯದಲ್ಲಿ ಏಕೆ ಕೆಲಸ ಮಾಡುವುದಿಲ್ಲ? ಪ್ರಪಂಚ ವಿಚಕ್ಷಣಾ ಶಕ್ತಿಗೆ ಕರ್ಮ ಕಾರಣವಾದಾಗ ಪರಮಾತ್ಮ ವಿಷಯದಲ್ಲಿನ ವಿಚಕ್ಷಣೆಗೆ ಶ್ರದ್ಧೆ ಏಕೆ ಅಗತ್ಯವಾಗಿದೆ?**

**ಉತ್ತರ :-** ಪ್ರಪಂಚವೆಲ್ಲಾ ಕರ್ಮ ನಿರ್ಮಿತ, ದೈವಿಕವೆಲ್ಲಾ ಶ್ರದ್ಧೆ ನಿರ್ಮಿತ. ಆದ್ದರಿಂದ ಮನುಷ್ಯನಿಗಿರುವ ಬುದ್ಧಿ ಪ್ರಪಂಚ ವಿಷಯಗಳನ್ನು ಗ್ರಹಿಸುವಂತೆ ದೇವರ ವಿಷಯಗಳನ್ನು ಗ್ರಹಿಸಿಕೊಳ್ಳಲಿಲ್ಲ. ಆದ್ದರಿಂದ ದೈವಿಕ ವಿಷಯವನ್ನು

ಕೇಳಿ ಅದನ್ನು ಪ್ರಪಂಚ ವಿಷಯವಾಗಿ ತಿಳಿಯುವವರು ಕೂಡಾ ಇದ್ದಾರೆ. ಕೆಲವರು ಬುದ್ಧಿ ಲೋಪದಿಂದ ಪ್ರಪಂಚ ವಿಷಯವನ್ನು ದೈವ ವಿಷಯವೆಂದು ಕೂಡಾ ಅಂದುಕೊಳ್ಳುತ್ತಿರುತ್ತಾರೆ. ಕೊನೆಗೆ ಅವರು ತಮ್ಮ ಬುದ್ಧಿಲೋಪವನ್ನು ತಿಳಿಯಲಾರದೆ ತಮ್ಮದು ಎಲ್ಲಾ ಸತ್ಯ ಇತರರದೆಲ್ಲವೂ ಅಸತ್ಯವೆಂದು ಅಂದುಕೊಳ್ಳುತ್ತಿರುತ್ತಾರೆ. ಕೆಲವರಿಗೆ ಪ್ರಪಂಚ ವಿಷಯಗಳಲ್ಲಿ ಶೇ.100 ರಷ್ಟು ಬುದ್ಧಿ ಕೆಲಸಮಾಡಿದಾಗ, ಪರಮಾತ್ಮ ವಿಷಯದಲ್ಲಿ ಕೇವಲ ಶೇ.10 ರಷ್ಟು ಮಾತ್ರವೇ ಕೆಲಸ ಮಾಡುವವರು ಇದ್ದಾರೆ. ಇನ್ನೂ ಕೆಲವರು ಶೇ.1, 2ರಷ್ಟು, ಕೆಲವರು ಶೇ. ಜೀರೋದಷ್ಟು ಕೆಲಸ ಮಾಡುವವರು ಇದ್ದಾರೆ. ಕೆಲವರು ಪ್ರಪಂಚ ವಿಷಯದಲ್ಲಿ ಶೇ.50 ರಷ್ಟು ಬುದ್ಧಿ ಕೆಲಸ ಮಾಡಿದಾಗ ಪರಮಾತ್ಮ ವಿಷಯದಲ್ಲಿ ಶೇ.90 ರಿಂದ 100ರಷ್ಟು ಬುದ್ಧಿ ಕೆಲಸ ಮಾಡುವವರು ಇದ್ದಾರೆ. ಕೆಲವರಿಗೆ ಪ್ರಪಂಚ ವಿಷಯದಲ್ಲಿ ಕಡಿಮೆ ದೇವರ ವಿಷಯದಲ್ಲಿ ಹೆಚ್ಚು ಬುದ್ಧಿ ಕೆಲಸ ಮಾಡಿದರೆ, ಕೆಲವರಿಗೆ ಪ್ರಪಂಚ ವಿಷಯದಲ್ಲಿ ಹೆಚ್ಚಾಗಿ ದೇವರ ವಿಷಯದಲ್ಲಿ ಕಡಿಮೆ ಕೆಲಸ ಮಾಡುವವರು ಇದ್ದಾರೆ. ಪ್ರಪಂಚ ವಿಷಯಗಳಲ್ಲಿ ವಿಚಕ್ಷಣೆ ಹೇಗಿದ್ದರೂ ಅದು ಇಹ ಲೋಕ ಸಂಬಂಧವಾದುದು. ಒಂದುವೇಳೆ ಕಡಿಮೆ ಇದ್ದರೂ ಪ್ರಪಂಚ ವಿಷಯಗಳ ಅವಗಾಹನೆ ಆಗಿರುವುದರಿಂದ ಅದು ಪ್ರಪಂಚ ಸಂಬಂಧ ಲಾಭ ನಷ್ಟಗಳಿಂದಾಗಲಿ, ಪ್ರಪಂಚ ಸಂಬಂಧ ಸುಖ ದುಃಖಗಳಿಂದಾಗಲಿ ಮುಡಿಹಾಕಲ್ಪಟ್ಟಿರುತ್ತದೆ. ಅದೇ ಪರಮಾತ್ಮ ವಿಷಯವಾದರೆ, ಮನುಷ್ಯನಿಗೆ ಜೀವನದಲ್ಲಿ ಲಭಿಸಬೇಕಾದ ಜ್ಞಾನ ಲಭಿಸದೆ ಹೋಗುತ್ತದೆ. ಮನುಷ್ಯ ಹುಟ್ಟಿ ಜ್ಞಾನವನ್ನು, ಜ್ಞಾನಶಕ್ತಿಯನ್ನು ಸಂಪಾದಿಸಿಕೊಳ್ಳದೆಹೋದರೆ ಆತನದ್ದು ವ್ಯರ್ಥ ಜೀವನವಾಗುತ್ತದೆ.

**8) ಪ್ರಶ್ನೆ :– ಪ್ರಪಂಚ ವಿಷಯಗಳಾದರೆ ನಿತ್ಯ ಅವಶ್ಯಕವಾದವು. ಎಲ್ಲಾ ಸಮಯಗಳಲ್ಲಿ ಅವುಗಳಲ್ಲೇ ಇರುತ್ತೇವೆ, ಆದ್ದರಿಂದ ತಪ್ಪದೇ ಆ ವಿಷಯಗಳ ಸತ್ಯಾಸತ್ಯ ವಿಚಕ್ಷಣೆ ಅಗತ್ಯ. ದೈವ ವಿಷಯಗಳನ್ನು ಯಾರೂ ಮಾತನಾಡುವುದಿಲ್ಲ. ಹಾಗಿರುವಾಗ ಅವುಗಳ ಸಂಬಂಧವೇ ಕಡಿಮೆ ಇರುತ್ತದೆ. ಆದ್ದರಿಂದ ಪ್ರಸ್ತಾವನೆಗೇ ಬಾರದ ವಿಷಯಗಳಲ್ಲಿ ವಿಚಕ್ಷಣೆ ಹೇಗೆ ಅಗತ್ಯ?**

**ಉತ್ತರ :–** ಪ್ರಪಂಚ ವಿಷಯಗಳಿರುವಂತೆ ದೈವ ವಿಷಯಗಳನ್ನು ಯಾರೂ ಮಾತನಾಡದೆ ಹೋಗಬಹುದು. ದೈವ ವಿಷಯಗಳ ಸಂಬಂಧ ಎಲ್ಲಿಯೂ ಯಾರಲ್ಲಿಯೂ ಇಲ್ಲದಿರುವಾಗ ದೈವ ಸಂಬಂಧ ವಿಷಯಗಳ ವಿಚಕ್ಷಣೆಯಿಂದ ಅಗತ್ಯವೇ ಇಲ್ಲವಲ್ಲ! ಎಂದು ನೀವು ಕೇಳುವುದು ವಾಸ್ತವವೇ ಆದರೂ, ಹಾಗೆ ಸುಮ್ಮನಿರದೆ, ಜೀವನವನ್ನು ವೃಥಾ ಮಾಡಿಕೊಳ್ಳದಂತೆ, ಜೀವನವನ್ನು ದೇವರ ವಿಷಯಗಳೊಂದಿಗೆ ಸಂಬಂಧ ಇಟ್ಟುಕೊಂಡು, ಜೀವನವನ್ನು ಸಾರ್ಥಕ ಮಾಡಿಕೊಳ್ಳುವಂತೆ ದೇವರು ಏರ್ಪಾಟು ಮಾಡಿಟ್ಟಿದ್ದಾನೆ. ಮನುಷ್ಯನ ಜೀವನಕ್ಕೆ ಅಗತ್ಯವಾದ ಜ್ಞಾನವನ್ನು ಕುರಿತು ಯಾರೂ ಮಾತನಾಡದಿದ್ದರೂ, ಅವುಗಳಲ್ಲಿ ವಿಚಕ್ಷಣ ಹೊಂದಿರುವಂತೆ ದೇವರು ಪ್ರತಿ ಸಮಾಜದಲ್ಲಿನ ಮನುಷ್ಯರಿಗೆ ದೇವರ ಜ್ಞಾನದಿಂದ ಕೂಡಿಕೊಂಡ ದೈವ ಗ್ರಂಥವನ್ನು ಕೊಟ್ಟಿದ್ದಾನೆ. ಪ್ರತಿ ಮನುಷ್ಯ ಯುಕ್ತವಯಸ್ಸು ಬರುತ್ತಲೇ ದೇವರ ಜ್ಞಾನದಿಂದ ಸಂಬಂಧ ಇಟ್ಟುಕೊಳ್ಳುವ ವಿಧವಾಗಿ ದೈವ ಗ್ರಂಥಗಳಲ್ಲಿನ ಜ್ಞಾನ ಇದೆ. ದೈವ ಗ್ರಂಥವನ್ನು ಓದಿದಾಗ ತಪ್ಪದೇ ಬುದ್ಧಿಯನ್ನು ಉಪಯೋಗಿಸಿ ತಿಳಿದ ವಿಷಯದಲ್ಲಿ ಅಂದರೇ ಓದಿದ ವಿಷಯದಲ್ಲಿ ಸತ್ಯಾಸತ್ಯವನ್ನು ತಿಳಿಯಬೇಕಾಗಿರುತ್ತದೆ. ಪ್ರಪಂಚ ವಿಷಯಗಳಲ್ಲಿ ಎಷ್ಟೋ ವಿಚಕ್ಷಣೆ ಹೊಂದಿರುವವನು ಕೂಡಾ ದೈವ ವಿಷಯಗಳಲ್ಲಿ ಸತ್ಯವನ್ನು ಗ್ರಹಿಸದೆ ಹೋಗುವುದು ನಡೆಯುತ್ತಿದೆ. ಆದ್ದರಿಂದ ದೈವ ವಿಷಯಗಳಲ್ಲಿ ಮನುಷ್ಯ ಬುದ್ಧಿಯನ್ನು ಬೆಳೆಸಿಕೊಳ್ಳಬೇಕಾದ ಅಗತ್ಯವಿದೆ.

**9) ಪ್ರಶ್ನೆ :– ದೈವಗ್ರಂಥಗಳು ಮೂರು ಬೇರಬೇರೆಯಾಗಿವೆ. ಮೂರು ಗ್ರಂಥಗಳು ಬೇರೆಬೇರೆ ಪ್ರಾಂತಗಳಲ್ಲಿ, ಬೇರೆಬೇರೆ ಭಾಷೆಗಳಲ್ಲಿ, ಬೇರೆಬೇರೆ ಪ್ರವಕ್ತರ ಮೂಲಕ ಬಂದಿರುವುದಲ್ಲದೆ, ಬೇರೆಬೇರೆ ಮತದವರು ತಮ್ಮ ಗ್ರಂಥಗಳಾಗಿ ಹೇಳಿಕೊಳ್ಳುತ್ತಿದ್ದಾರೆ. ಹಾಗೆ ಇರುವುದರಿಂದ ಅವು ಬೇರೆಬೇರೆ ದೇವರುಗಳನ್ನು ಕುರಿತು ಹೇಳಿದಂತೆ ಪ್ರಚಾರ ಇದೆ. ಮೂರು ಗ್ರಂಥಗಳನ್ನು ಅನುಸರಿಸಿ ಪರಮಾತ್ಮ, ಯೆಹೋವಾ, ಅಲ್ಲಾಹ್ ಎನ್ನುವ ಮೂವರು ದೇವರುಗಳಿರುವಂತೆ ತಿಳಿಯುತ್ತಿದೆ. ಪ್ರಪಂಚದಲ್ಲಿ ಒಟ್ಟು ಹನ್ನೆರಡು ಮತಗಳಿವೆ, ಅವುಗಳ ಪ್ರಕಾರ ಒಟ್ಟು ಹನ್ನೆರಡು**

**ಜನ ದೇವರುಗಳು ಇದ್ದಾರಾ ಎಂದು ಕೇಳುತ್ತಿದ್ದೇನೆ? ಉಳಿದ ದೇವರುಗಳ ಹೆಸರುಗಳು ಗೊತ್ತಿಲ್ಲ, ಅವರ ಹೆಸರುಗಳನ್ನು ಹೇಳೆಂದು ಕೇಳುತ್ತಿದ್ದೇನೆ, ದಯೆಮಾಡಿ ತಿಳಿಸಿರಿ?**

**ಉತ್ತರ :–** ದೈವ ಗ್ರಂಥಗಳು ಮೂರು ಇರುವುದು ವಾಸ್ತವವೇ! ಆದರೆ ಆ ಮೂರು ಒಂದೇ ಗ್ರಂಥದಿಂದ ಬಂದಿರುವವೇ ಆಗಿರುವುದರಿಂದ, ಅದರಲ್ಲಿ ಒಂದೇ ದೇವರ ಜ್ಞಾನವೇ ಇದೆ. ದೇವರು ಮೂರು ಹೆಸರುಗಳಿಂದ ಹೇಳಲ್ಪಟ್ಟರೂ ಮೂವರು ಒಬ್ಬನೆಯೆಂದು ತಿಳಿಯಬೇಕು. ಮೂರು ಹೆಸರುಗಳು ಒಂದೇ ದೇವರವೇ. ಉಳಿದ ಒಂಭತ್ತು ಮತಗಳಿಗು ಕೂಡಾ ಒಂದೇ ದೇವರೆ ಇದ್ದಾನೆ. ಯಾರು ಯಾವ ಹೆಸರಿನಿಂದ ಹೇಳಿದರೂ ಆ ಹೆಸರುಗಳೆಲ್ಲವೂ ಒಬ್ಬನವೆಯೆಂದು ಹೇಳಬಹುದು. ಏಕೆಂದರೆ! ಪ್ರಪಂಚವನ್ನು ಸೃಷ್ಠಿಸಿರುವುದು ಒಂದೇ ದೇವರೇ, ಆತನೇ ಎಲ್ಲರಿಗೂ ಸೃಷ್ಠಿಕರ್ತ. ಬೇರೆ ಸೃಷ್ಠಿಕರ್ತ ಯಾರೂ ಇಲ್ಲ. ಸೃಷ್ಠಿಸಿದವನು ಒಬ್ಬ ದೇವರೇ, ಸೃಷ್ಠಿಸಲ್ಪಟ್ಟಿರುವುದು ಪ್ರಪಂಚದಲ್ಲಿ ಕಾಣಿಸುವ ಜೀವರಾಶಿಗಳು, ಮನುಷ್ಯರು, ಪ್ರಾಣಿಗಳು ಮುಂತಾದವು ಇವೆ. ಕಾಣಿಸದ ಜೀವರಾಶಿಗಳು ದೇವತೆಗಳು, ದೆವ್ವಗಳು. ಇವರೆಲ್ಲರೂ ಪಾಲಿಸಲ್ಪಡುವವರಾಗಿದ್ದು, ಪಾಲಿಸುವ ಪರಿವಾರವಾದ ಭೂತಗಳು, ಗ್ರಹಗಳು ಎನ್ನುವವರನ್ನು ಕೂಡಾ ದೇವರೇ ಸೃಷ್ಠಿಸಿದ್ದಾನೆ. ದೇವರು ಯಾರು? ಸೃಷ್ಠಿಸಲ್ಪಟ್ಟ ಜೀವರಾಶಿಗಳಲ್ಲಿ ಪಾಲಿ ಸಲ್ಪಡುವವರು ಯಾರು? ಪಾಲಿಸುವವರು ಯಾರು? ಮನುಷ್ಯರನ್ನು ದೇವರು ಏಕೆ ಸೃಷ್ಠಿಸಿದ್ದಾನೆ? ಎಂದು ಒಟ್ಟಾರೆ ಸಮಾಚಾರವನ್ನು ತಿಳಿಯುವುದೇ ದೇವರ ಜ್ಞಾನ ತಿಳಿಯುವುದೆಂದು ಹೇಳಬಹುದು. ಈ ವಿಷಯಗಳೆಲ್ಲವನ್ನು ಕೂಲಂಕುಷ ವಾಗಿ ತಿಳಿಸುವವೇ ದೈವಗ್ರಂಥಗಳು. ದೈವ ಗ್ರಂಥಗಳನ್ನು ತಿಳಿಯಲ್ಪಟ್ಟರೆ ಮನುಷ್ಯನೊಂದರ ಹುಟ್ಟುಪೂರ್ವೋತ್ತರಗಳು ತಿಳಿಯುತ್ತವೆ.

**10) ಪ್ರಶ್ನೆ :– ದೈವಗ್ರಂಥಗಳನ್ನು ಓದಿದರೆ ಮನುಷ್ಯನೊಂದರ ಹುಟ್ಟು ಪೂರ್ವೋ ತ್ತರಗಳು ತಿಳಿಯುತ್ತವೆಂದಿದ್ದೀರ ಅಲ್ಲವೆ! ಹುಟ್ಟು ಪೂರ್ವೋತ್ತರಗಳೆಂದರೆ ಏನು?**

**ಉತ್ತರ :–** ಮನುಷ್ಯನೊಂದರ ಮೊದಲು ಕೊನೆಗಳನ್ನು ಹುಟ್ಟು ಪೂರ್ವೋತ್ತರಗಳೆಂದು ಕರೆಯುತ್ತಿದ್ದಾರೆ. 'ಹುಟ್ಟು ಪೂರ್ವೋತ್ತರ' ಎನ್ನುವ ಪದವನ್ನು ವಿವರವಾಗಿ ಹೇಳಿದರೆ ಮನುಷ್ಯನ ಹುಟ್ಟನ್ನು ಕುರಿತು ತಿಳಿಸುವುದು ಮತ್ತು ಮನುಷ್ಯನ ಅಂತ್ಯವನ್ನು ಕುರಿತು ಹೇಳುವುದು ಎಂದು ಅರ್ಥ ಹೇಳಬಹುದು. ಬಿಡಿಸಿ ನೋಡಿದರೆ ಹುಟ್ಟುಪೂರ್ವೋತ್ತರ ಎನ್ನುವ ಪದದಲ್ಲಿ ಮೂರು ಪದಗಳು ಕೂಡಿವೆ. **ಹುಟ್ಟು+ಪೂರ್ವ+ಉತ್ತರ** ಎನ್ನುವ ಮೂರು ಪದಗಳು ಸೇರಿ **"ಹುಟ್ಟು ಪೂರ್ವೋತ್ತರ"** ಎನ್ನುವ ಪದ ತಯಾರಾಗಿದೆ. ಹುಟ್ಟು ಎಂದರೇ ಮನುಷ್ಯನೊಂದರ ಹುಟ್ಟು ಎಂದು ತಿಳಿಯುತ್ತಿದೆ. ನಂತರ ಪೂರ್ವ ಎಂದರೇ ಮನುಷ್ಯ ಹುಟ್ಟುವುದಕ್ಕಿಂತ ಪೂರ್ವದಲ್ಲಿ ಗತ ಜನ್ಮಗಳು ಎಂದರೇ ಹುಟ್ಟುವುದಕ್ಕಿಂತ ಮೊದಲು ಕಳೆದ ಜನ್ಮಗಳು ಎಂದು ಅರ್ಥ. ಉತ್ತರ ಎಂದರೇ ಹುಟ್ಟಿದ ನಂತರ ಬರುವ ಮರಣ ಎಂದು ಅರ್ಥ. ಇಲ್ಲಿ ಮೊದಲಿರುವ ಎರಡು ಪದಗಳಿಗು ಅರ್ಥ ಸರಿಹೋಗುತ್ತಿದೆ ಆದರೆ, ಕೊನೆಯಲ್ಲಿರುವ 'ಉತ್ತರ' ಎನ್ನುವ ಪದಕ್ಕೆ ಮರಣ ಎಂದು ಹೇಳುವುದರಿಂದ ಉತ್ತರಕ್ಕು ಮರಣಕ್ಕು ಏನು ಸಂಬಂಧವೆಂದು ಕೆಲವರು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಹೀಗೆ ಇದೆ.

ನಮಗೆ ಭೂಮಿಮೇಲೆ ನಾಲ್ಕು ದಿಕ್ಕುಗಳು ಇವೆ. ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ, ಎನ್ನುವ ನಾಲ್ಕು ದಿಕ್ಕುಗಳಲ್ಲಿ ಪೂರ್ವ ಪಶ್ಚಿಮ ದೈವ ಸಂಬಂಧ ದಿಕ್ಕುಗಳೆಂದು, ದಕ್ಷಿಣ ಉತ್ತರ ದಿಕ್ಕುಗಳು ಎರಡು ಪ್ರಪಂಚ ಸಂಬಂಧ ದಿಕ್ಕುಗಳೆಂದು ಜ್ಞಾನ ತಿಳಿದ ಹಿರಿಯರು ಹೇಳುವುದು ನಡೆಯುತ್ತಿದೆ. ಅವರ ಭಾವನೆ ಪ್ರಕಾರ ಲೋಕಕ್ಕೆ ಬೆಳಕನ್ನು ಕೊಡುವ ಸೂರ್ಯನಿಗೆ ಪೂರ್ವ ಹುಟ್ಟುವುದಕ್ಕೆ, ಪಶ್ಚಿಮ ಮರಣಕ್ಕೆ ಗುರುತಾಗಿ ಇವೆ. ಹುಟ್ಟುವುದನ್ನು ಉದಯಿಸುವುದು ಎಂದು, ಮರಣವನ್ನು ಅಸ್ತಮಿಸುವುದು ಎಂದು ಕೂಡಾ ಹೇಳುತ್ತಿರುತ್ತೇವೆ. ಮನುಷ್ಯನ ಹುಟ್ಟು, ಸಾವಿಗೆ ದಕ್ಷಿಣ ಉತ್ತರ ಎರಡು ದಿಕ್ಕುಗಳು ಗುರುತಾಗಿವೆ. ಮನುಷ್ಯನ ಜನ್ಮಕ್ಕೆ ದಕ್ಷಿಣ ದಿಕ್ಕು, ಹಾಗೆ ಮರಣಕ್ಕೆ ಉತ್ತರ ದಿಕ್ಕು ಪ್ರತೀಕವಾಗಿವೆ. ಮನುಷ್ಯನ ಸಾವಿಗೆ ಗುರುತಾಗಿರುವ ಉತ್ತರವನ್ನು

ಎಲ್ಲರೂ ತಿಳಿಯುವಂತೆ ಮನುಷ್ಯ ಮರಣದ ನಂತರ ಅಂತ್ಯಕ್ರಿಯೆಗಳು ಮಾಡುವ ಸ್ಮಶಾನ ಊರಿಗೆ ಉತ್ತರ ದಿಕ್ಕಿನಲ್ಲಿಯೇ ನಿರ್ಣಯಿಸಿ ಇಟ್ಟಿದ್ದಾರೆ. ಚಿಕ್ಕಂದಿನಲ್ಲಿ ನಾಮಕರಣ ಮಾಡಿದ ದಿನದಂದು ಎಂದಿಗಾದರೂ ಮನುಷ್ಯ ಸ್ಮಶಾನಕ್ಕೆ ಹೋಗಬೇಕಾಗಿದೆಯೆನ್ನುವ ಭಾವನೆಯಿಂದ ಕಾಲುಗಳು ಸ್ಮಶಾನದಕಡೆ, ತಲೆ ಜನ್ಮಕ್ಕೆ ದಿಕ್ಕಾದ ದಕ್ಷಿಣ ದಿಕ್ಕಿಗೆ ಇಟ್ಟು ಮಲಗಿಸುವುದು ನಡೆಯುತ್ತಿದೆ. ಆದ್ದರಿಂದ 'ತಲೆ ದಕ್ಷಿಣದಕಡೆ ಕಾಲುಗಳು ಸ್ಮಶಾನದಕಡೆ' ಎಂದು ಹೇಳುತ್ತಿರುತ್ತಾರೆ. ಸುಡುಗಾಡು ಎಂದರೇ ಸ್ಮಶಾನ ಎಂದು ಅರ್ಥ. ಸ್ಮಶಾನ ಉತ್ತರ ದಿಕ್ಕಿನಲ್ಲಿರುವುದರಿಂದ ತಲೆ ದಕ್ಷಿಣಕ್ಕೆ, ಕಾಲು ಉತ್ತರಕ್ಕೆ ಇಟ್ಟು ಮಲಗಿಸುವುದು ನಡೆಯುತ್ತಿದೆ. ಆಗಲೇ ಅಲ್ಲ ಯಾವಾಗಾದರೂ ಕಾಲುಗಳನ್ನು ಸ್ಮಶಾನಕ್ಕೆ ಚಾಚಿದಂತೆ ಉತ್ತರದ ಕಡೆಗೆ ಇಟ್ಟು, ತಲೆಯನ್ನು ದಕ್ಷಿಣದಕಡೆಗೆ ಇಟ್ಟು ಮಲಗುವುದು ಒಳ್ಳೆಯದೆಂದು ಈಗಲೂ ಕೂಡಾ ಅಲ್ಲಲ್ಲಿ ಹೇಳುತ್ತಿರುತ್ತಾರೆ. ಅಷ್ಟೇ ಅಲ್ಲದೆ "ದಾನ ಧರ್ಮ ಇಲ್ಲದಿದ್ದರೂ ದಕ್ಷಿಣಕ್ಕೆ ತಲೆ ಇಟ್ಟುಕೊಂಡು ಮಲಗುವುದು ಒಳ್ಳೆಯದೆಂದು" ಹಿರಿಯರು ಹೇಳುತ್ತಿರುತ್ತಾರೆ. ಹಾಗೆ ಮಲಗುವುದರಿಂದ ಉತ್ತರ ದಕ್ಷಿಣದಕಡೆ ಪ್ರವಹಿಸುತ್ತಿರುವ ಅಯಸ್ಕಾಂತಶಕ್ತಿ ತಲೆಯಿಂದ ಶರೀರವೆಲ್ಲ ಪ್ರವಹಿಸುವುದರಿಂದ ಶರೀರದಲ್ಲಿ ರೋಗಗಳಿದ್ದರೂ ಕಡಿಮೆಯಾಗುತ್ತವೆಂದು, ಶರೀರದಕ್ಕೆ ರೋಗ ನಿರೋಧಕ ಶಕ್ತಿ ಲಭಿಸುತ್ತದೆಂದು ಹೇಳುತ್ತಿರುತ್ತಾರೆ.

ಈ ವಿಧವಾಗಿ ಉತ್ತರ ದಿಕ್ಕನ್ನು ಮನುಷ್ಯನ ಮರಣಕ್ಕೆ ಗುರುತಾಗಿ ಉಪಯೋಗಿಸಿ ಹೇಳುತ್ತಿದ್ದರು. ಆದರೆ ಈದಿನ ಉತ್ತರ ಎನ್ನುವ ಪದವೊಂದರ ಅರ್ಥ ತಿಳಿಯದಂತೆ ಹೋಗಿದೆ. ದೈವಗ್ರಂಥವನ್ನು ಓದುವುದರಿಂದ ಮನುಷ್ಯನಿಗೆ ಸಂಬಂಧಿಸಿದ ಜ್ಞಾನವೆಲ್ಲ ತಿಳಿಯುತ್ತಿದೆ. ಎಂದರೇ ಮನುಷ್ಯನೊಂದರ ಹುಟ್ಟು ಪೂರ್ವೋತ್ತರಗಳು ತಿಳಿಯುತ್ತಿವೆ. ಈ ಮಾತಿಗಿರುವ ಅರ್ಥದ ಪ್ರಕಾರ ಮನುಷ್ಯನ ಜನ್ಮವನ್ನು ಮಧ್ಯದಲ್ಲಿಟ್ಟುಕೊಂಡು, ಜನ್ಮಕ್ಕಿಂತ ಪೂರ್ವದಲ್ಲಿ ಗತ ಜನ್ಮಗಳಿರುವಂತೆ, ಹಾಗೆ ಮನುಷ್ಯನಿಗೆ ಹುಟ್ಟಿದ ನಂತರ ಜನ್ಮಗಳಿರುವಂತೆ ತಿಳಿದು, ಜನ್ಮಗಳು

ಇಲ್ಲದಂತೆ ಮಾಡಿಕೊಂಡರೆ ಮೋಕ್ಷವಿರುವಂತೆ ತಿಳಿಯುತ್ತಿದೆ. "ಹುಟ್ಟು ಪೂರ್ವೋತ್ತರ' ಎನ್ನುವ ಪದದಲ್ಲಿ ಹುಟ್ಟು ಮೊದಲು ಹೇಳಲ್ಪಟ್ಟರೂ, ಅರ್ಥದಲ್ಲಿ ಹುಟ್ಟನ್ನು ಮಧ್ಯದಲ್ಲಿ ಇಟ್ಟುಕೊಂಡು ಹುಟ್ಟಿಗಿಂತ ಮುಂದೆ ಹಿಂದೆ ಮನುಷ್ಯನಿಗಿರುವ ಸ್ಥಿತಿಯನ್ನು ತಿಳಿಯುವ ಸಾಮರ್ಥ್ಯ ದೈವ ಗ್ರಂಥಗಳಲ್ಲಿನ ಜ್ಞಾನದಿಂದ ತಿಳಿಯುತ್ತಿದೆ. ಗತ ಜನ್ಮಗಳಲ್ಲಿ ಎಲ್ಲಿದ್ದೇವೆಂದು ಅಲ್ಲದೆ ಹುಟ್ಟಿಗಿಂತ ಮೊದಲು ಗತ ಜನ್ಮಗಳು ಇವೆಯೆನ್ನುವ ವಿಶ್ವಾಸವನ್ನು ದೈವಗ್ರಂಥ ಉಂಟುಮಾಡುತ್ತದೆ. ದೈವಗ್ರಂಥದಿಂದ ಹುಟ್ಟಿದ ನಂತರ ಜನ್ಮಗಳು ಇವೆಯೆಂದು, ಜನ್ಮಗಳು ಇಲ್ಲದೆ ಹೋದರೆ ಮೋಕ್ಷ ಇದೆಯೆಂದು ತಿಳಿಯುತ್ತಿದೆ.

**11) ಪ್ರಶ್ನೆ :– ದೈವಗ್ರಂಥಗಳು ಮೂರು ಇವೆ ಅಲ್ಲವೆ! ಮೂರು ಗ್ರಂಥಗಳಲ್ಲಿ ಯಾವ ಗ್ರಂಥವನ್ನು ಓದಿದರೂ, ಮನುಷ್ಯನೊಂದರ ಹುಟ್ಟು ಪೂರ್ವೋತ್ತರಗಳು ತಿಳಿಯುತ್ತವಾ? ಇಲ್ಲವೆ ಮೂರು ಗ್ರಂಥಗಳು ಓದಬೇಕಾ?**

**ಉತ್ತರ :–** ಮೂರು ದೈವ ಗ್ರಂಥಗಳಲ್ಲಿ ಯಾವುದನ್ನು ಓದಿದರೂ ಅವು ಮನುಷ್ಯನೊಂದರ ಸಾವುಹುಟ್ಟುಗಳನ್ನು, ಗತ ಜನ್ಮಗಳನ್ನು, ಮುಂಬರುವ ಜನ್ಮಗಳನ್ನು ಕುರಿತು ತಿಳಿಯಬಹುದು. ಆದರೆ ಮೂರು ಗ್ರಂಥಗಳನ್ನು ಓದುವುದರಿಂದ ಒಂದು ಗ್ರಂಥದಲ್ಲಿನ ಜ್ಞಾನವೇ ಉಳಿದ ಎರಡು ಗ್ರಂಥಗಳ ಮೂಲಕ ಧೃಢೀಕರಿಸಲ್ಪಡುತ್ತಿದೆ. ಒಂದು ಗ್ರಂಥದಲ್ಲಿನ ಜ್ಞಾನ ಸತ್ಯವಾದುದೆಂದು, ಉಳಿದ ಎರಡು ಗ್ರಂಥಗಳು ಸಾಕ್ಷ್ಯ ಹೇಳುತ್ತಿರುವುದರಿಂದ, ಮನುಷ್ಯನಿಗೆ ಒಂದು ದೈವಗ್ರಂಥದಲ್ಲಿನ ಜ್ಞಾನ ಉಳಿದ ಎರಡು ಗ್ರಂಥಗಳು ಓದುವುದರಿಂದ ಮನುಷ್ಯನಲ್ಲಿ ದೃಢವಾಗಿ ನಿಂತುಹೋಗುತ್ತಿದೆ ಮೂರು ಗ್ರಂಥಗಳು ಒಂದಕ್ಕೊಂದು ಸಾಕ್ಷಿಯಾಗಿ ಇವೆಯೆಂದು ತಿಳಿಯಬಲ್ಲದು. ಆದ್ದರಿಂದ ಯಾವ ಮತಸ್ಥನಾದರೂ ಒಂದು ಗ್ರಂಥವನ್ನು ಅಲ್ಲದೆ ಮೂರು ಗ್ರಂಥಗಳನ್ನು ಓದಬೇಕು. ಹಾಗೆ ಓದದವನು ಯಾವ ಧರ್ಮದಲ್ಲಿ ಇಲ್ಲದಂತೇಯೆಂದು ಅಂತಿಮ ದೈವಗ್ರಂಥದಲ್ಲಿ ಸೂರಾ 5, ಆಯತ್ 68ರಲ್ಲಿ ಹೇಳಿದ್ದಾರೆ ನೋಡಿರಿ. **(5–68) "ಓ ಗ್ರಂಥವಾಹಕರೇ! ನೀವು ತೌರಾತು (ಭಗವದ್ಗೀತೆ), ಇಂಜೀಲು (ಬೈಬಲ್), ನಿಮ್ಮ ಪ್ರಭು ಕಡೆಯಿಂದ**

**ನಿಮ್ಮ ಹತ್ತಿರಕ್ಕೆ ಕಳಿಸಲ್ಪಟ್ಟಿರುವುದನ್ನು (ಖುರ್‌ಆನ್ ಗ್ರಂಥವನ್ನು) ನಿಮ್ಮ ಜೀವನಗಳಲ್ಲಿ ನೆಲೆಗೊಳಿಸುವವರೆಗು ನೀವು ಯಾವ ಧರ್ಮದ ಮೇಲೆ ಇಲ್ಲದಂತೆ"**

ಖುರ್‌ಆನ್ ಗ್ರಂಥದಲ್ಲಿ ಈ ವಾಕ್ಯವನ್ನು ನೋಡಿದ ನಂತರ ಮೂರು ಗ್ರಂಥಗಳಲ್ಲಿನ ಜ್ಞಾನವನ್ನು ಅವನ ಜೀವನದಲ್ಲಿ ಜಾರಿ ಮಾಡಿದೆಹೋದರೆ, ಆಚರಿಸದೆ ಹೋದರೆ ಅವನು ಪ್ರಸ್ತುತ ನಾನು ಇಂತಹ ಮತಸ್ಥನೆಂದು ಹೇಳುತ್ತಿದ್ದರೂ, ಅವನು ಆ ಮತಸ್ಥನು ಕೂಡಾ ಅಲ್ಲ. ಕೊನೆಗೆ ಯಾವ ಮತ ಧರ್ಮದಲ್ಲಿ ಕೂಡಾ ಇಲ್ಲದಂತೆಯೇ ಲೆಕ್ಕಿಸಲ್ಪಡುತ್ತದೆ. ನಾನು ಮುಸ್ಲಿಮ್ ಎಂದು ಹೇಳುವವನು ಮೂರು ಗ್ರಂಥಗಳನ್ನು ಓದದೆ ಹೋದರೆ ಮೂರು ಗ್ರಂಥಗಳ ಜ್ಞಾನವನ್ನು ಆಚರಿಸದೆಹೋದರೆ ಅವನು ಯಾವ ಧರ್ಮದಲ್ಲಿ ಇಲ್ಲದಂತೇಯೆಂದು ದೇವರೇ ತನ್ನ ಗ್ರಂಥದಲ್ಲಿ ಹೇಳಿದ್ದಾನೆ. ಈ ಮಾತಿನ ಪ್ರಕಾರ ಮೂರು ಗ್ರಂಥಗಳನ್ನು ಗೌರವಭಾವನೆಯಿಂದ ಓದದೆ ಹೋದರೆ ಖುರ್‌ಆನ್ ಗ್ರಂಥದಲ್ಲಿ ದೇವರು ಹೇಳಿದ ಆಯತ್‌ನ್ನು ಮನುಷ್ಯ ಲೆಕ್ಕಮಾಡಲಿಲ್ಲವೆಂದು ಹೇಳಬಹುದು. ಅಷ್ಟೇ ಅಲ್ಲದೆ ಅಂತಹವನನ್ನು ದೇವರು ಯಾವ ಧರ್ಮದಲ್ಲಿ ಇಲ್ಲದಂತೆ ಲೆಕ್ಕಿಸುತ್ತಾನೆ. ಆದ್ದರಿಂದ ನೀನು ಯಾವ ಮತಸ್ಥನಾದರೂ ಫರವಾಗಿಲ್ಲ. ಉಳಿದ ಎರಡು ಗ್ರಂಥಗಳನ್ನು ನಿನ್ನ ಗ್ರಂಥದೊಂದಿಗೆ ಓದಬೇಕು. ದೇವರು ಹೇಳಿದಂತೆ ಮೂರು ಗ್ರಂಥಗಳನ್ನು ಅಸೂಯೆ ಇಲ್ಲದಂತೆ ಓದುವವನು ಬೇಗನೆ ದೇವರ ಸಾನ್ನಿಧ್ಯವನ್ನು ಸೇರುತ್ತಾನೆ. ಅಂತಹವನು ಮರಣದ ನಂತರ ಜನ್ಮಕ್ಕೆ ಹೋಗುವುದಿಲ್ಲ. ಮರಣದ ನಂತರ ಪರಲೋಕವನ್ನು ಹೊಂದುತ್ತಾನೆ.

**12) ಪ್ರಶ್ನೆ :– ಸಾಧಾರಣ ಮನುಷ್ಯರಿಗೆ ಪ್ರಪಂಚ ವಿಷಯಗಳಲ್ಲಿ ಬುದ್ಧಿ ಚೆನ್ನಾಗಿ ಕೆಲಸ ಮಾಡಿದರೂ, ದೈವ ವಿಷಯಗಳಲ್ಲಿ ಅವರ ಬುದ್ಧಿ ಅಷ್ಟಷ್ಟು ಮಾತ್ರವೇ ಕೆಲಸ ಮಾಡುತ್ತದೆ. ಅಂತಹವರಿಗೆ ದೈವಗ್ರಂಥದಲ್ಲಿ ಹೇಳಲ್ಪಟ್ಟ ವಿಷಯ ಸರಿಯಾಗಿ ಅರ್ಥ ಆಗಲಿಲ್ಲವೆಂದರೇ ಒಪ್ಪಿಕೊಳ್ಳಬಹುದು. ಆದರೆ ನಾವು ದೊಡ್ಡ ಜ್ಞಾನಿಗಳು ಎಂದು ಪ್ರಕಟಿಸಿಕೊಂಡವರು, ಸಮಾಜದಲ್ಲಿ ಗುರುಗಳಾಗಿ ಗೌರವಿಸಲ್ಪಡುವವರು,**

**ಸ್ವಾಮೀಜಿಗಳಾಗಿ ಚಲಾವಣೆ ಆಗುವವರು ದೈವಗ್ರಂಥಗಳಲ್ಲಿನ ಯಾವ ವಿಷಯವನ್ನಾದರೂ ಸುಲಭವಾಗಿ ಗ್ರಹಿಸಿಕೊಂಡು, ವಿವರವಾಗಿ ಹೇಳಲ್ಪಡುವ ಸಾಮರ್ಥ್ಯ ಇರಬೇಕು. ಅಂತಹವರು ಈದಿನ ದೈವ ಗ್ರಂಥದಲ್ಲಿನ ವಿಷಯಗಳನ್ನು ಸರಿಯಾಗಿ ಗ್ರಹಿಸಿಕೊಳ್ಳದ ಸ್ಥಿತಿಯಲ್ಲಿದ್ದು ಗ್ರಂಥಗಳಲ್ಲಿರುವ ವಿಷಯವನ್ನು ಇರುವುದು ಇದ್ದಂತೆ ಅರ್ಥಮಾಡಿಕೊಳ್ಳದೆ, ಅಲ್ಲಿರುವ ವಾಸ್ತವ ವಿಷಯವನ್ನು ಬಿಟ್ಟು ಬೇರೆ ವಿಷಯವನ್ನು, ಅಲ್ಲಿ ಇಲ್ಲದ ವಿಷಯವನ್ನು, ಅವಾಸ್ತವ ವಿಷಯವನ್ನು ಬೋಧಿಸುತ್ತಿದ್ದಾರೆ. ಜ್ಞಾನ ಹಿರಿಯರು, ಮತ ಹಿರಿಯರು ಎಂದು ಹೆಸರುಪಡೆದವರು ಹಾಗೆ ವಾಸ್ತವವಲ್ಲದ ಅವಾಸ್ತವವನ್ನು ಬೋಧಿಸಿದರೆ ಸಾಮಾನ್ಯ ಮನುಷ್ಯರು ದೈವಗ್ರಂಥದಲ್ಲಿನ ನಿಜ ಜ್ಞಾನವನ್ನು ಹೇಗೆ ತಿಳಿಯಬಲ್ಲರು? ದೈವ ಗ್ರಂಥದಲ್ಲಿ ಜ್ಞಾನ ಇರುವಾಗ ಅದು ಮನುಷ್ಯರಿಗೆ ತಿಳಿಯದಂತೆ ಹೋಗುತ್ತದಲ್ಲವೆ?**

**ಉತ್ತರ :-** ಹೊರಗೆ ಪ್ರಪಂಚದಲ್ಲಿ ದೊಡ್ಡ ಜ್ಞಾನಿಗಳಾಗಿ ಇರುವವರು, ಗುರುಗಳಾಗಿರುವವರು, ಸ್ವಾಮೀಜಿಗಳಾಗಿ ಚಲಾವಣೆ ಆಗುವವರು, ಮತ ಹಿರಿಯರು ಮೊದಲಾದವರಿಗೆ ದೈವಗ್ರಂಥದಲ್ಲಿನ ಜ್ಞಾನಕ್ಕೆ ಯಾವುದೇ ಸಂಬಂಧವಿಲ್ಲ. ಸಮಾಜದಲ್ಲಿ ಜ್ಞಾನಿಗಳೆನಿಸಿಕೊಂಡವರಿಗೆ ಇರುವ ಜ್ಞಾನ ಬೇರೆ, ದೈವ ಗ್ರಂಥಗಳಲ್ಲಿ ಇರುವ ಜ್ಞಾನ ಬೇರೆ. **ಹೊರಗೆ ಎಷ್ಟು ದೊಡ್ಡ ಜ್ಞಾನಿಗಳಾದರೂ ದೈವಗ್ರಂಥಗಳಲ್ಲಿ ಮೊದಲಿನಿಂದ ಜ್ಞಾನ ತಿಳಿಯಬೇಕಾದ್ದೆ.** ಈದಿನ ಮುಖ್ಯವಾದ ಮೂರು ಮತದವರು ನಮ್ಮ ಮತಗ್ರಂಥಗಳೆಂದು ಹೇಳಿಕೊಳ್ಳುವ **ಭಗವದ್ಗೀತೆ, ಬೈಬಲ್, ಖುರ್‌ಆನ್** ಎನ್ನುವ ಮೂರು ಗ್ರಂಥಗಳಲ್ಲಿನ ಜ್ಞಾನವನ್ನು ತಿಳಿಯಲಾರದೆ ದೇವರು ಹೇಳಿರುವುದು ಒಂದಾದರೆ ಮನುಷ್ಯರು ಹೇಳುವುದು ಮತ್ತೊಂದಾಗಿ ಹೇಳಿಕೊಳ್ಳುತ್ತಿದ್ದಾರೆ. ಇದರಪ್ರಕಾರ **ಭಗವದ್ಗೀತೆ** ಹಿಂದೂಗಳಿಗೆ ಸರಿಯಾಗಿ ತಿಳಿಯದೇ ಹೋಗಿದೆ. ಹಾಗೇ ಕ್ರೈಸ್ಥರಿಗೆ **ಬೈಬಲ್,** ಮುಸ್ಲಿಮ್‌ರಿಗೆ **ಖುರ್‌ಆನ್** ಗ್ರಂಥ ಸರಿಯಾಗಿ ಅರ್ಥವಾಗಲಿಲ್ಲವೆಂದು ಹೇಳಬಹುದು. ಯಾವ ಗ್ರಂಥದಲ್ಲಿ ಹೇಗೆ ಮನುಷ್ಯ ದೈವ ಸಂದೇಶವನ್ನು ಅರ್ಥ ಮಾಡಿಕೊಳ್ಳಲಾರದೆ ಗೊಂದಲಕ್ಕೊಳಗಾಗಿ ತಪ್ಪುದಾರಿ ಹಿಡಿದಿದ್ದಾನೋ ಆ ವಿಷಯವನ್ನು ತಿಳಿಸುತ್ತಾ

ನೀವು ಅಂದುಕೊಂಡಿರುವುದು ಸತ್ಯವೋ ಅಲ್ಲವೋ ನೋಡಿಕೊಳ್ಳಿರೆಂದು ಹೇಳುವುದೇ ಈ ಗ್ರಂಥವೊಂದರ ಉದ್ದೇಶ. ಆದ್ದರಿಂದ **'ಸತ್ಯಾಸತ್ಯ ವಿಚಕ್ಷಣೆ'** ಎಂದು ಗ್ರಂಥವನ್ನು ಕರೆಯುತ್ತಿದ್ದೇವೆ.

**13) ಪ್ರಶ್ನೆ :– ಮೂರು ಮತಗಳಲ್ಲಿಯೂ ತಿಳಿಯಬೇಕಾದ ಸಂದಿಗ್ಧ ವಿಷಯಗಳು ಎಷ್ಟೋ ಇದ್ದರೂ ಹೆಚ್ಚಾಗಿ ಅಂತಿಮ ದೈವಗ್ರಂಥ ಖುರಾನ್‌ನಲ್ಲಿಯೂ, ಕಡಿಮೆ ಪ್ರಥಮ ದೈವಗ್ರಂಥದಲ್ಲಿಯೂ ಇವೆ. ಮೊದಲು ಪ್ರಥಮ ದೈವಗ್ರಂಥ ಭಗವದ್ಗೀತೆಯಲ್ಲಿರುವ ಒಂದು ಶ್ಲೋಕದಲ್ಲಿನ ವಿಷಯವನ್ನು, ಅದರಲ್ಲಿನ ಸತ್ಯಾ ಸತ್ಯಗಳನ್ನು ತಿಳಿಸಬೇಕಾಗಿ ಕೋರುತ್ತಿದ್ದೇವೆ.**

**ಉತ್ತರ :–** ಪ್ರಥಮ ದೈವಗ್ರಂಥ ಭಗವದ್ಗೀತೆಯಲ್ಲಿ ಜ್ಞಾನಯೋಗ ಎನ್ನುವ ಅಧ್ಯಾಯದಲ್ಲಿ 13ನೇ ಶ್ಲೋಕ ಹೀಗೆ ಇದೆ.

**ಶ್ಲೋ॥ ಚಾತುರ್ವರ್ಣಂ ಮಯಾಸೃಷ್ಟಂ ಗುಣಕರ್ಮ ವಿಭಾಗಶಃ।**
**ತಸ್ಯಕರ್ತಾರ ಮಹಿ ಮಾಂ ವಿದ್ಧ್ಯಕರ್ತಾರ ಮವ್ಯಯಮ್॥**

**(ಪರಮಾತ್ಮ)**

**ಭಾವಾರ್ಥ :– "ನಾಲ್ಕು ವರ್ಣಗಳು ನನ್ನಿಂದ ಸೃಷ್ಟಿಸಲ್ಪಟ್ಟಿವೆ. ಮನುಷ್ಯರ ಗುಣಕರ್ಮಗಳನ್ನನುಸರಿಸಿ ನಾಲ್ಕು ವರ್ಣಗಳಾಗಿ ಸೃಷ್ಟಿಸುವುದು ನಡೆದಿದೆ. ನಾಲ್ಕು ವರ್ಣಗಳ ಅವರಿಗೆ ಕರ್ತನಾಗಿ ಅಲ್ಲದೆ ಅವ್ಯಯನಾಗಿ ಇದ್ದೇನೆ."** ಎಂದು ಶ್ಲೋಕದಲ್ಲಿ ಹೇಳಿದ್ದಾನೆ. ಆದರೆ ಇದರ ವಿವರವನ್ನು ಸುಮಾರು ಮೂರುನೂರ ನಲವತ್ತುಜನ ಬರೆದಿದ್ದಾರೆ. 340 ಭಗವದ್ಗೀತೆಗಳಲ್ಲಿ ರಚಯಿತರೆಲ್ಲರೂ ನಾಲ್ಕು ವರ್ಣಗಳನ್ನು ಅದಕ್ಕೆ ನಾಲ್ಕು ಕುಲಗಳ ಹೆಸರುಗಳು ಹೇಳುವುದಾಗಿದೆ. ಅದರಲ್ಲಿ ಮೊದಲು ಬ್ರಾಹ್ಮಣ, ನಂತರ ವೈಶ್ಯರು, ಕ್ಷತ್ರಿಯರು ಎಂದು ಹೇಳಿ ಕೊನೆಯದಾಗಿ ಉಳಿದ ಕುಲಗಳೆಲ್ಲವನ್ನು ಸೇರಿಸಿ ಶೂದ್ರರು ಎಂದು ಹೇಳಿದ್ದಾರೆ. ಬ್ರಾಹ್ಮಣ, ವೈಶ್ಯ, ಕ್ಷತ್ರಿಯ, ಶೂದ್ರ ಎಂದು ನಾಲ್ಕು ವಿಧಗಳಾಗಿ ವಿಭಜಿಸಿ ಹೇಳಿದ್ದಾರೆ. ದೇವರು ಹೇಳಿದ ಶ್ಲೋಕದಲ್ಲಿ ಈ ನಾಲ್ಕು ಕುಲಗಳ ಹೆಸರುಗಳು ಯಾವುವೂ ಇಲ್ಲ. ಇದನ್ನನುಸರಿಸಿ ಮನುಷ್ಯರು ಈ ಶ್ಲೋಕದಲ್ಲಿ ಹೇಳಿದ ಭಾವನೆ ತಪ್ಪೆಂದು

ತಿಳಿಯುತ್ತಿದೆ. ದೇವರ ಭಾವನೆ ಬೇರೆ ಇರುವಾಗ, ಮನುಷ್ಯರ ಭಾವನೆ ಬೇರೆ ಇರುವಂತೆ ಕಾಣಿಸುತ್ತಿದೆ. ದೇವರ ಉದ್ದೇಶ ಜ್ಞಾನವಾಗಿದ್ದು, ಮನುಷ್ಯರ ಉದ್ದೇಶ ಅಜ್ಞಾನವಾಗಿದೆ. ಈ ಶ್ಲೋಕ ಭಾವನೆಯನ್ನು ಓದಿದ ಬಹಳ ಜನರಿಗೆ ದೇವರು ಹೇಳಿದ ಭಾವನೆ ತಿಳಿಯದಂತೆ ಹೋಗಿದೆ. ಅದರಿಂದ ಈ ಶ್ಲೋಕದಲ್ಲಿ ಸ್ವಲ್ಪವೂ ವಿಚಕ್ಷಣೆ ಇಲ್ಲದ ಮನುಷ್ಯರೆಲ್ಲರೂ ಮನುಷ್ಯರು ಹೇಳಿದ ವಿವರವನ್ನೇ ನಂಬಿದ್ದಾರೆ. ಸ್ವಲ್ಪವಾದರೂ ವಿಚಕ್ಷಣಾ ಬುದ್ಧಿಯಿಂದ ಆಲೋಚಿಸದೆಹೋಗಿದ್ದಾರೆ. ಕೆಲವರು ಮನುಷ್ಯರು ಅವರ ಭಾವನೆಯನ್ನು ಅವರು ಬರೆದಾಗ, ಉಳಿದವರೆಲ್ಲರೂ ಅದನ್ನೇ ಏಕೆ ನಂಬಬೇಕು?

ಗ್ರಂಥದಲ್ಲಿ ಉಳಿದ ಸಂದರ್ಭಗಳಲ್ಲಿ ಕೆಲವುಕಡೆ 'ದೇವರು ಎಲ್ಲರಿಗೂ ಸಮಾನನು. ಎಲ್ಲರಲ್ಲಿ ಒಂದೇ ವಿಧವಾಗಿದ್ದಾನೆ' ಎಂದು ಹೇಳಲ್ಪಟ್ಟಿದೆ. ದೈವಜ್ಞಾನ ಎಲ್ಲರಿಗೂ ಸಮಾನವಾಗಿ ಹೇಳಲ್ಪಟ್ಟಿದೆ. ಎಲ್ಲಿಯಾದರೂ ಕುಲಪ್ರಸ್ತಾಪವಾಗಲಿ, ಮತ ಪ್ರಸ್ತಾಪವಾಗಲಿ ಇಲ್ಲ. ಸರ್ವ ಜೀವಿಗಳು ಸಮಾನವೆಂದು, ತನ್ನ ಜ್ಞಾನ ಎಲ್ಲರಿಗೂ ಸಮಾನವಾಗಿ ಇದೆಯೆಂದು ಹೆಣ್ಣು, ಗಂಡು ವ್ಯತ್ಯಾಸವಿಲ್ಲದೆ ಕುಲ, ಮತ ಭೇದ ಇಲ್ಲದಂತೆ ಸರ್ವ ಜೀವಿಗಳಲ್ಲಿ ದೇವರು ಸಮಾನವಾಗಿ ಇದ್ದಾನೆಂದು, ಸರ್ವ ಜೀವಿಗಳಿಗು ತನ್ನ ಜ್ಞಾನ ಸಮಾನವೆಂದು ಎಲ್ಲರೂ ಗುಣಗಳಲ್ಲಿ ಹುಟ್ಟಿದ್ದಾರೆಂದು, ಅವರು ನಿವಾಸಿಸುವ ಊರನ್ನು ಅನುಸರಿಸಿ ಇಂತಹ ಊರಿನವರೆನ್ನುವಂತೆ, ಅವರು ನಿವಾಸಿಸುವ ಗುಣಗಳನ್ನನುಸರಿಸಿ ಇಂತಹ ಗುಣದವರೆಂದು ಹೇಳುತ್ತಿರುತ್ತೇವೆ. ತಾಮಸ ಗುಣಭಾಗದಲ್ಲಿರುವ ಜೀವಿಗಳನ್ನು ತಾಮಸರೆಂದು, ರಾಜಸ ಗುಣ ಭಾಗದಲ್ಲಿರುವ ಜೀವಿಗಳನ್ನು ರಾಜಸರೆಂದು, ಸಾತ್ತ್ವಿಕ ಗುಣ ಭಾಗದಲ್ಲಿರುವ ಜೀವಿಗಳನ್ನು ಸಾತ್ತ್ವಿಕರೆಂದು ಕರೆಯುತ್ತಿದ್ದಾರೆ.

ಈ ವಿಧವಾಗಿ ಗುಣಗಳನ್ನು ಅನುಸರಿಸಿ ಮನುಷ್ಯರಿಗೆ ಹೆಸರುಗಳು ಇವೆ. ಗ್ರಾಮಗಳ ನಿವಾಸವನ್ನನುಸರಿಸಿ ಇಂತಹ ಗ್ರಾಮಸ್ಥನೆಂದು ಹೇಳಿದಂತೆ, ಗುಣಗಳ ನಿವಾಸವನ್ನನುಸರಿಸಿ ಇಂತಹ ಗುಣಸ್ಥನೆನ್ನುವ ಹೆಸರು ಹೇಳುತ್ತಿದ್ದೇವೆ. ಅದೇ ವಿಧವಾಗಿ ಭಗವದ್ಗೀತೆಯಲ್ಲಿ ದೇವರು ಮನುಷ್ಯ ನಿವಾಸಿಸುವ

ಗುಣಗಳನ್ನನುಸರಿಸಿ, ಸಂಪಾದಿಸುವ ಕರ್ಮಗಳನ್ನನುಸರಿಸಿ, ಮನುಷ್ಯರು ನಾಲ್ಕು ವರ್ಣಗಳಾಗಿ ಇದ್ದಾರೆಂದು ಹೇಳಿದ್ದಾನೆ. 'ವರ್ಣ' ಎನ್ನುವ ಮಾತಿಗೆ 'ಬಣ್ಣ' ಎಂದು ಅರ್ಥವಿದೆ. ಬಣ್ಣ ಎಂದರೆ ಜ್ಞಾನ ಎಂದು ಕೂಡಾ ಅರ್ಥವಿದೆ. ಈ ವಿಷಯ ಸಾಕ್ಷ್ಯಕ್ಕೆ ಅಂತಿಮ ದೈವ ಗ್ರಂಥ ಖುರ್‌ಆನ್‌ನಲ್ಲಿ ಸೂರಾ 2, ಆಯತ್ 138ರಲ್ಲಿ ನೋಡಿದರೆ ಹೀಗೆ ಇದೆ ನೋಡಿರಿ. **(2–138) "ಅಲ್ಲಾಹ್ ಬಣ್ಣವನ್ನು ಸ್ವೀಕರಿಸಿರಿ. ಅಲ್ಲಾಹ್‌ಗಿಂತ ಒಳ್ಳೆಯ ಬಣ್ಣ ಯಾರದು ಆಗಬಲ್ಲದು? ನಾವು ಮಾತ್ರ ಆತನನ್ನೇ ಆರಾಧಿಸುತ್ತೇವೆ."** ಎಂದು ಇದೆ. ದೇವರ ಜ್ಞಾನವನ್ನು ಮೀರಿದ ಜ್ಞಾನ ಎಲ್ಲಿಯೂ ಯಾರದು ಇಲ್ಲ. ಆದ್ದರಿಂದ 'ದೇವರ ಜ್ಞಾನವನ್ನು ಸ್ವೀಕರಿಸಿರಿ' ಎಂದು ಹೇಳಿ ನಾವು ದೇವರ ಜ್ಞಾನದ ಪ್ರಕಾರ ದೇವರನ್ನೇ ಆರಾಧಿಸುತ್ತಿದ್ದೇವೆ ಎಂದು ಹೇಳಿದ್ದಾರೆ. ಅದೇ ವಿಧವಾಗಿ ಭಗವದ್ಗೀತೆಯಲ್ಲಿ 'ನಾಲ್ಕು' ಬಣ್ಣಗಳ ಮನುಷ್ಯರಿದ್ದಾರೆಂದು' ಹೇಳುತ್ತಾ 'ನಾಲ್ಕು ವರ್ಣಗಳ ಮನುಷ್ಯರನ್ನು ಸೃಷ್ಠಿಸಿದ್ದೇನೆ' ಎಂದು ಹೇಳಿದ್ದಾರೆ. ಇದರ ಅರ್ಥದ ಪ್ರಕಾರ ನಾವು ವಿಚಕ್ಷಣಾ ಬುದ್ಧಿಯಿಂದ ತಿಳಿಯಲ್ಪಟ್ಟರೆ 'ಮನುಷ್ಯರಲ್ಲಿ ನಾಲ್ಕು ವಿಧಗಳ ಜ್ಞಾನಗಳು ಇರುವವರಿದ್ದಾರೆಂದು' ತಿಳಿಯುತ್ತಿದೆ. ಈ ವಿಷಯವನ್ನು ಭಗವದ್ಗೀತೆಯಲ್ಲಿ ಮೋಕ್ಷ ಸನ್ಯಾಸ ಯೋಗದಲ್ಲಿ 19, 20, 21, 22 ಶ್ಲೋಕಗಳಲ್ಲಿ ಹೇಳಿದ್ದಾರೆ ನೋಡಿರಿ.

**ಶ್ಲೋ॥ 19.** **ಜ್ಞಾನಂ ಕರ್ಮಚ ಕರ್ತಾ ಚ ತ್ರಿಧೈವ ಗುಣ ಭೇದತಃ।**
**ಪ್ರೋಚ್ಯತೇ ಗುಣ ಸಂಖ್ಯಾನೇ ಯಥಾವ ಚ್ಛೃಣು ತಾ ನ್ಯಪಿ॥**
**(ಗುಣಗಳು)**

**ಭಾವಾರ್ಥ :–** ಮನುಷ್ಯರ ಶರೀರದಲ್ಲಿ ತಲೆಯಲ್ಲಿ ಗುಣಗಳನ್ನು ವಿವರಿಸಿಕೊಂಡು ನೋಡಿದರೆ, ಗುಣಗಳ ವಿಧಾನವೆಲ್ಲವೂ ತಿಳಿದರೆ, ಗುಣಗಳ ಅನುಬಂಧವಾಗಿ ಕರ್ಮ, ಕರ್ಮ ಅನುಬಂಧವಾಗಿ ಕರ್ತ ಇರುತ್ತದೆಂದು ತಿಳಿದರೆ ಗುಣ ಭೇದಗಳನ್ನನುಸರಿಸಿ ಮೂರು ವಿಧಗಳಾದ ಜ್ಞಾನಗಳು ತಿಳಿಯಲ್ಪಟ್ಟಿವೆ.

**ಶ್ಲೋ॥ 20** **ಸರ್ವ ಭೂತೇಷು ಯೇ ನೈಕಂ ಭಾವ ಮವ್ಯಯ ಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷು ತದ್‌ಜ್ಞಾನಂ ವಿದ್ಧಿ ಸಾತ್ತ್ವಿಕಮ್ ॥**
**(ಸಾತ್ತ್ವಿಕ ಜ್ಞಾನ)**

**ಭಾವಾರ್ಥ :–** ಬೇರೆಬೇರೆ ರೂಪಗಳಾಗಿ ತಯಾರಾದ ಸರ್ವ ಜೀವರಾಶಿಗಳಲ್ಲಿನ ಆತ್ಮವೊಂದೇ. ಆತ್ಮ ಎಲ್ಲ ಶರೀರಗಳಲ್ಲಿ ಇದ್ದರೂ ನಾಶ ಇಲ್ಲದ್ದೆಂದು ತಿಳಿಸುವ ಜ್ಞಾನವನ್ನು ಸಾತ್ತ್ವಿಕ ಜ್ಞಾನವೆಂದು ಹೇಳಬಹುದು.

**ಶ್ಲೋ॥ 21 ಪೃಥಕ್ತ್ವೇನ ತು ಯದ್‌ಜ್ಞಾನಂ ನಾನಾಭಾವಾನ್ ಪೃಥಗ್ವಿಧಾನ್।**
**ವೇತ್ತಿ ಸರ್ವೇಷು ಭೂತೇಷು ತದ್ ಜ್ಞಾನಂ ವಿದ್ಧಿ ರಾಜಸಮ್॥**
**(ರಾಜಸ ಜ್ಞಾನ)**

**ಭಾವಾರ್ಥ :–** ಬೇರೆಬೇರೆ ಜೀವರಾಶಿಗಳಲ್ಲಿ ಆತ್ಮ ಬೇರೆಬೇರೆಯಾಗಿ ಇದೆಯೆಂದು, ಹಾಹೇ ಅವನಿಗಿರುವ ಗುಣಗಳು ಕೂಡಾ ಬೇರೆಬೇರೆಯಾಗಿ ಇರುತ್ತವೆಯೆಂದು ಭಾವಿಸುವಂತೆ ಮಾಡುವ ಜ್ಞಾನವನ್ನು ರಾಜಸ ಜ್ಞಾನವೆಂದು ಹೇಳಬಹುದು.

**ಶ್ಲೋ॥ 22 ಯತ್ತು ಕೃತ್ಸ್ನವ ದೇಕಸ್ಮಿನ್ ಕಾರ್ಯೇಸಕ್ತ ಮಹೈತುಕಮ್।**
**ಅತತ್ತ್ವಾರ್ಥವ ದಲ್ಪಂ ಚ ತತ್ತಾಮಸ ಮುದಾಹೃತಮ್॥**
**(ತಾಮಸ ಜ್ಞಾನ)**

**ಭಾವಾರ್ಥ :–** ಕಾರಣ ಇಲ್ಲದ್ದು, ಅಸತ್ಯವಾದುದು, ಸ್ವಲ್ಪವಾದುದಾದ ಒಂದು ಕಾರ್ಯವೇ ಸರ್ವಾರ್ಥ ಸಿದ್ಧಿಯೆನ್ನುತ್ತಾ ಅದರಲ್ಲಿಯೇ (ಅಂತಹ ಕೆಲಸಗಳಲ್ಲಿಯೇ) ಆಸಕ್ತಿಯನ್ನು ಉಂಟುಮಾಡುವ ಜ್ಞಾನವನ್ನು ತಾಮಸ ಜ್ಞಾನವೆಂದು ಹೇಳಬಹುದು.

ಈ ವಿಧವಾಗಿ ಗುಣಗಳಿಂದ ಕೂಡಿದ ಮೂರು ವಿಧಗಳ ಜ್ಞಾನದವರು, ಅಥವಾ ಮೂರು ವಿಧಗಳ ವರ್ಣ (ಬಣ್ಣಗಳ) ದವರು ಇದ್ದಾರೆಂದು ಹೇಳಬಹುದು. ಮೂರು ಗುಣಗಳ ಜ್ಞಾನ ಇದ್ದಂತೆ, ಮನುಷ್ಯನ ತಲೆಯಲ್ಲಿನ ಗುಣಚಕ್ರದಲ್ಲಿ ಮತ್ತೊಂದು ನಾಲ್ಕನೇ ವರ್ಣ ಕೂಡಾ ಇದೆ. ಗುಣಗಳ ವರ್ಣಗಳು ಮೂರಾಗಿದ್ದು, ಗುಣವಿಲ್ಲದ ವರ್ಣ ನಾಲ್ಕನೆಯದು ಇದೆ. ಮೂರು ವರ್ಣಗಳು ಪ್ರಕೃತಿ ಜನಿತಗಳಾಗಿ ಇರುವಾಗ, ನಾಲ್ಕನೆ ವರ್ಣ (ಜ್ಞಾನ) ದೈವ ಸಮ್ಮತವಾದುದಾಗಿದೆ. ಈ ವಿಧವಾಗಿ ಗುಣಗಳು ಇರುವವು ಮೂರು, ಗುಣಗಳು

ಇಲ್ಲದ್ದು ಒಂದು ಒಟ್ಟು ನಾಲ್ಕು ವರ್ಣಗಳಿರುವಾಗ, ಮನುಷ್ಯ (ಜೀವಾತ್ಮ) ತನ್ನ ಕರ್ಮದ ಪ್ರಕಾರ ಮೂರು ಗುಣಭಾಗಗಳಲ್ಲಿಯೂ, ಕರ್ಮರಹಿತವಾಗಿರುವ ಗುಣರಹಿತ ಯೋಗಭಾಗದಲ್ಲಿಯೂ ನಿವಾಸಿಸುತ್ತಿದ್ದಾನೆ. ಜೀವಿಯು ನಿವಾಸಿಸುವ ಸ್ಥಳವನ್ನನುಸರಿಸಿ ಸಾತ್ತ್ವಿಕನೆಂದೊ, ರಾಜಸನೆಂದೊ, ತಾಮಸನೆಂದೊ ಗುಣ ವರ್ಣಗಳನ್ನು ಅನುಸರಿಸಿ ಹೇಳಬಹುದು. ಗುಣವಿಲ್ಲದ ಸ್ಥಳವನ್ನನುಸರಿಸಿ **ಯೋಗಿ** ಎಂದು ಹೇಳಬಹುದು. ಈ ವಿಧವಾಗಿ ಕರ್ಮ, ಗುಣಗಳಿರುವುದನ್ನು ಅನುಸರಿಸಿ ಮೂರು ವಿಧಗಳು, ಇಲ್ಲದಿರುವುದನ್ನನುಸರಿಸಿ ಒಂದು ವಿಧವಾಗಿ ಒಟ್ಟು ನಾಲ್ಕು ವರ್ಣಗಳಾಗಿ ಹೇಳಬಹುದು. ಈ ನಾಲ್ಕು ವರ್ಣಗಳನ್ನೇ ಜ್ಞಾನಯೋಗದಲ್ಲಿ 13ನೇ ಶ್ಲೋಕದಲ್ಲಿ ಹೇಳಿದ್ದಾರೆ. ಅಲ್ಲಿ ಹೇಳಿದ ವಿಷಯವನ್ನು ಗ್ರಹಿಸಲಾರದ ಮನುಷ್ಯರು ನಾಲ್ಕು ಕುಲಗಳಾಗಿ ಮನುಷ್ಯರನ್ನು ಹೇಳುವುದು ನಡೆದಿದೆ. ಅದು ಪೂರ್ತಿ ತಪ್ಪೆಂದು ಗ್ರಹಿಸಿದ ನಾವು ಅವರು ಹೇಳಿದ ಭಾವನೆ ತಪ್ಪೆಂದು ಹೇಳಿ ಯಾವುದು ಸತ್ಯವೊ, ಯಾವುದು ಅಸತ್ಯವೊ ವಿವರವಾಗಿ ನಿಮಗೆ ಈಗ ಹೇಳುವುದು ನಡೆದಿದೆ. ಈ ವಿಷಯ ಇನ್ನೂ ವಿವರವಾಗಿ ಅರ್ಥವಾಗಬೇಕೆಂದರೆ ದೃಶ್ಯರೂಪವಾಗಿ ಅರ್ಥವಾಗುವಂತೆ ತೋರಿಸಿದ್ದೇವೆ ನಂತರ ಪುಟದಲ್ಲಿ ನೋಡಿರಿ.

ನಂತರ ಪುಟದಲ್ಲಿ ತೋರಿಸಿದ ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳ ಸಮುದಾಯದಲ್ಲಿ ಗುಣಚಕ್ರವನ್ನು ಎದುರುಗಡೆ ತಿರುಗಿಸಿ ನೋಡಿದರೆ ಪಕ್ಕದ ಚಿತ್ರ ಕಾಣಿಸುತ್ತದೆ. ಗುಣಚಕ್ರದಲ್ಲಿ ಮಧ್ಯ ಭಾಗದೊಂದಿಗೆ ಸಹ ಒಟ್ಟು ನಾಲ್ಕು ಭಾಗಗಳಿವೆ. ನಾಲ್ಕು ಭಾಗಗಳನ್ನೇ ಶ್ಲೋಕದಲ್ಲಿ ನಾಲ್ಕು ವರ್ಣಗಳು ಎಂದು ಹೇಳಿದ್ದೇವೆ. ಈ ನಾಲ್ಕು ಭಾಗಗಳಲ್ಲಿ ಮಧ್ಯ ಭಾಗ ಗುಣರಹಿತವಾದುದು. ಉಳಿದ ಮೂರು ಭಾಗಗಳು ಮೂರು ಗುಣಗಳ ಭಾಗಗಳೆಂದು ಹೇಳಬಹುದು. ಈ ನಾಲ್ಕು ಭಾಗಗಳಲ್ಲಿ ಜೀವಾತ್ಮ ಎಲ್ಲಿಯಾದರೂ ಇರಬಹುದು. ಆದರೆ ಮಧ್ಯ ಭಾಗದಲ್ಲಿ ಹೊರತುಪಡಿಸಿ ಉಳಿದ ಮೂರು ಭಾಗಗಳಲ್ಲಿ ಗತ ಜನ್ಮ ಕರ್ಮಗಳನ್ನು ಅನುಸರಿಸಿ ಜೀವಾತ್ಮ ನಿವಾಸವಿರುವುದು ನಡೆಯುತ್ತದೆ. ಯಾವ




ತಲೆ ಮಧ್ಯ ಭಾಗದಲ್ಲಿರುವ ನಾಲ್ಕು ಚಕ್ರಗಳ ಜೋಡಣೆ




ಗುಣಚಕ್ರ

ಗುಣಭಾಗದಲ್ಲಿ ಜೀವಾತ್ಮ ಇದ್ದರೇ ಆ ಗುಣದ ಹೆಸರಿನಿಂದ ಅವನನ್ನು ಹೇಳಬಹುದು. ಹೊರಗೆ ಗುಣಭಾಗದಲ್ಲಿ ಇದ್ದರೆ ತಾಮಸನು ಎಂದು, ಎರಡನೆ ಭಾಗದಲ್ಲಿ ಇದ್ದರೆ ರಾಜಸನೆಂದು, ಒಳಗಿನ ಮೂರನೆ ಭಾಗದಲ್ಲಿ ಇದ್ದರೆ ಸಾತ್ತ್ವಿಕನು ಎಂದು, ಪೂರ್ತಿ ಮಧ್ಯ ಭಾಗದಲ್ಲಿ ಇದ್ದರೆ ಯೋಗಿ ಎಂದು ಹೇಳಬಹುದು. ಇದು ವಾಸ್ತವವಾದ ಅಂತರ್ಭಾಗದಲ್ಲಿ ಕಾಣಿಸದಂತಿರುವ ಯಾಥಾರ್ಥ. ಈ ನಾಲ್ಕು ಭಾಗಗಳವರನ್ನು ಕರ್ಮವನ್ನನುಸರಿಸಿ ಆಯಾ ಸ್ಥಳಗಳಲ್ಲಿ ಇರುವವರೆಂದು ಹೇಳಬಹುದು. ಆದ್ದರಿಂದ ಶ್ಲೋಕದಲ್ಲಿ **"ಗುಣ ಕರ್ಮ ವಿಭಾಗಶಃ"** ಎಂದು ಹೇಳಿದ್ದಾರೆ. ನಾಲ್ಕು ಸ್ಥಳಗಳಲ್ಲಿ ಇರುವವರನ್ನು ನಾಲ್ಕು ವರ್ಣದವರೆಂದು ಹೇಳಿದಾಗ, ಅದನ್ನು ಅರ್ಥಮಾಡಿಕೊಳ್ಳದ ಮನುಷ್ಯರು ವಿಚಕ್ಷಣಾ ಜ್ಞಾನ ಇಲ್ಲದವರಾಗಿ, ದೇವರು ಒಂದು ಹೇಳಿದ್ದರೆ, ಮನುಷ್ಯರು ಇನ್ನೊಂದು ತಿಳಿದು ಹೊರಗೆ ಅಜ್ಞಾನದಿಂದ ತಯಾರು ಮಾಡಿಕೊಂಡ ಕುಲಗಳನ್ನು ಸೇರಿಸಿ ಬ್ರಾಹ್ಮಣ, ವೈಶ್ಯ, ಕ್ಷತ್ರಿಯ, ಶೂದ್ರ ಎಂದು ಹೇಳಿದ್ದಾರೆ. ದೇವರ ದೃಷ್ಠಿಯಲ್ಲಾಗಲಿ ಆತನ ಭಾವನೆಯಲ್ಲಾಗಲಿ ಕುಲಗಳ ಪ್ರಸ್ತಾಪವೇ ಇಲ್ಲ. ದೇವರು ಹೇಳದಿರುವುದನ್ನು ಮನುಷ್ಯ ಹೇಳಿಕೊಳ್ಳುತ್ತಾ, ದೇವರು ಹೇಳಿದ ಅಂತರ್ಮುಖ ಜ್ಞಾನವನ್ನು ಗಾಳಿಗೆ ಬಿಟ್ಟುಹಾಕಿದ್ದಾರೆ. ಆದ್ದರಿಂದ ದೇವರು ಮನುಷ್ಯನಿಗೆ ಹೇಳಿದ ಜ್ಞಾನ ಯಾರಿಗೂ ತಿಳಿಯದೇ ಹೋಗಿದೆ. ಈ ವಿಧವಾಗಿ ದೇವರು ತನ್ನ ಗ್ರಂಥಗಳಲ್ಲಿ ಮನುಷ್ಯರಿಗೆ ತನ್ನ ಧರ್ಮಗಳನ್ನು ತಿಳಿಸಿದರೂ, ಅವು ಸಾಮಾನ್ಯ ಮನುಷ್ಯನವರೆಗು ಸೇರಲಿಲ್ಲ. ಮತ ಹಿರಿಯರು, ಗುರುಗಳು ಸ್ವಾಮೀಜಿಗಳಾದವರು ತಮಗೆ ಜ್ಞಾನ ಗೊತ್ತಿದೆಯೆಂದು, ತಾವು ಹೇಳಿದಂತೇ ನಡೆದುಕೊಳ್ಳಬೇಕೆಂದು ಹೇಳುವುದರಿಂದ ಅವರು ತಪ್ಪುದಾರಿ ಹಿಡಿದುಹೋಗಿ ಎಲ್ಲರನ್ನು ತಪ್ಪುದಾರಿ ಹಿಡಿಸುತ್ತಿದ್ದಾರೆ. ಅವರ ಮತ ಹಿರಿಯರು, ಗುರುಗಳು ಹೇಳಿರುವುದನ್ನು ಕೇಳಿ ನಮ್ಮ ಹಿರಿಯರು ಹೇಳಿರುವುದನ್ನೇ ನಾವು ಕೇಳುತ್ತೇವೆಯೆಂದು ಹೇಳುವವರು, ತಾವು ಕೇಳಿರುವುದು ಸತ್ಯವಾ ಅಲ್ಲವಾ! ಎಂದು ಸ್ವಲ್ಪವಾದರೂ ವಿಚಕ್ಷಣೆ ಇಲ್ಲದವರಾಗಿ ಮೂಢವಾಗಿ ಮನುಷ್ಯರು ಹೇಳಿದ ಮಾತುಗಳನ್ನು ಕೇಳಿ ದೇವರು ಹೇಳಿದ ಸತ್ಯವನ್ನು ಗ್ರಹಿಸಲಾರದೆ,

ಹೋದರೆ ಅಂತಹವನು ನಿಜವಾದ ಜ್ಞಾನವನ್ನು ಎಂದಿಗೂ ತಿಳಿದುಕೊಳ್ಳಲಾರನು. ಹಿರಿಯರು ಹೇಳಿರುವುದು ಕೇಳಬೇಕಾದ್ದೆ. ಕೇಳಿರುವುದನ್ನು ತನ್ನ ಬುದ್ಧಿಯಿಂದ ಆಲೋಚಿಸಬೇಕಾದ್ದೆ. ಆಲೋಚಿಸಿದ ನಂತರ ಸತ್ಯಾಸತ್ಯಗಳನ್ನು ಬಿಡಿಸಿ ಅದರಲ್ಲಿ ಸತ್ಯವನ್ನು ಗ್ರಹಿಸಿ ಅಸತ್ಯವನ್ನು ಬಿಟ್ಟುಹಾಕಬೇಕು. ಹಾಗೆ ಮಾಡದೆಹೋದರೆ ಇತರರು ಹೇಳಿದ ಮಾತುಗಳನ್ನು ಕುರುಡರಂತೆ ನಂಬಿದರೆ ಕೊನೆಗೆ ನಿನಗೇ ನಷ್ಟ ಉಂಟಾಗುತ್ತದೆ. ನಿನಗೇ ದೇವರ ಜ್ಞಾನ ತಿಳಿಯದೇ ಹೋಗುತ್ತದೆ. ಆದ್ದರಿಂದ ನಿನ್ನ ಜನ್ಮವೇ ವೃಥಾ ಆಗುತ್ತದೆ.

**14) ಪ್ರಶ್ನೆ :– ಪ್ರಥಮ ದೈವ ಗ್ರಂಥ ಭಗವದ್ಗೀತೆಯಲ್ಲಿ ಒಂದು ಶ್ಲೋಕದಲ್ಲಿಯೇ ಪೂರ್ತಿ ದಾರಿ ತಪ್ಪಿಹೋಗಿ, ನಮಗೆ ತಿಳಿದ ವಿಷಯ ಸತ್ಯವಾ ಅಲ್ಲವಾ! ಎನ್ನುವ ವಿಚಕ್ಷಣೆ ಇಲ್ಲದವರಾಗಿ ಹೋಗಿದ್ದೇವೆ. ನೀವು ಬಿಡಿಸಿ ಹೇಳುವುದರಿಂದ ನನಗೆ ಬಂದಿರುವ ಸಂಶಯ ಸಂಪೂರ್ಣವಾಗಿ ಬಗೆಹರಿದಿದೆ. ಒಂದು ಶ್ಲೋಕದ ಹತ್ತಿರವೇ ಎಷ್ಟೋ ಜ್ಞಾನವನ್ನು ಕಳೆದುಕೊಂಡಿದ್ದೇವೆ. ಭಗವದ್ಗೀತೆಯನ್ನು ಬರೆದವರೆಲ್ಲರೂ ಜ್ಞಾನ ತಿಳಿದವರೆಯೆಂದು ನಂಬುವುದರಿಂದ, ನಾವು ತಪ್ಪುದಾರಿ ಹಿಡಿದು ಹೋಗಿದ್ದೇವೆಯೆಂದು, ದೇವರ ಜ್ಞಾನ ದೈವ ಗ್ರಂಥದಲ್ಲಿ ಇದ್ದರೂ ಅದು ತಿಳಿಯದೇ ಹೋಗಿದೆಯೆಂದು, ಈಗ ಚೆನ್ನಾಗಿ ಅರ್ಥವಾಗುತ್ತಿದೆ. ಇಂತಹ ಪರಿಸ್ಥಿತಿ ಒಂದು ಹಿಂದೂ ಮತಕ್ಕೇ ಪರಿಮಿತಿ ಆಗಲಿಲ್ಲ. ಉಳಿದ ಮತಗಳಲ್ಲಿ ಕೂಡಾ ಇದೇ ವಿಧವಾಗಿ ಪ್ರಜೆಗಳು ದೇವರ ಜ್ಞಾನದ ಬಳಿ ಮೋಸಹೋಗುವುದು ನಡೆಯುತ್ತಿದೆ. ಗ್ರಂಥದಲ್ಲಿ ಒಂದುಕಡೆ ಹೇಳಿದ ಜ್ಞಾನ ಮತ್ತೊಂದುಕಡೆ ಬೇರೆ ವಿಧವಾಗಿ ಅಥವಾ ಅಜ್ಞಾನವಾಗಿ ಹೇಳಲ್ಪಟ್ಟಿರುತ್ತದೆ. ಆಗ ಆ ವಿಷಯದ ಮೇಲೆ ಸ್ವಲ್ಪ ಅನುಮಾನ ಬಂದರೂ, ಬಹಳಜನ ಆ ವಿಷಯುವನ್ನು ಗಾಳಿಗೆ ಬಿಟ್ಟು ಹಿರಿಯರು ಹೇಳಿರುವುದನ್ನು ಕೇಳಬೇಕೆಂದು ಅಂದುಕೊಳ್ಳುತ್ತಿದ್ದಾರೆ. ಅಲ್ಲಿಯೇ ತಪ್ಪುಹೆಜ್ಜೆ ಹಾಕಿದಂತಾಗುತ್ತಿದೆ. ದೇವರು ಹೇಳಿರುವುದು ಮುಖ್ಯವಾ? ಮತ ಹೇಳಿರುವುದು ಮುಖ್ಯವಾ? ಎಂದು ಆಲೋಚಿಸದೆ ಮತ ಹಿರಿಯರು ಹೇಳಿದ ಮತಾಚಾರದ ಪ್ರಕಾರ ಹೋಗುವುದರಿಂದ ಮನುಷ್ಯನಿಗೆ ದೇವರ ಜ್ಞಾನ ತಿಳಿಯದೆಹೋಗುತ್ತಿದೆ.**

ಈಗ ನಮಗೆ ಜ್ಞಾನೋದಯವಾಗಿದೆ. ಆದ್ದರಿಂದ ನಾನು ನನಗೆ ಅನುಮಾನ ಬಂದ ವಿಷಯವನ್ನು ಕೇಳುತ್ತೇನೆ. ದಯೆಮಾಡಿ ನೀವು ನಮಗೆ ಸರಿಯಾದ ಜ್ಞಾನವನ್ನು ತಿಳಿಸಿರೆಂದು ಕೋರುತ್ತಾ ಈಗ ಅಂತಿಮ ದೈವಗ್ರಂಥದಲ್ಲಿ ಒಂದು ವಿಷಯವನ್ನು ಕೇಳುತ್ತೇನೆ. ನಾನು ಒಬ್ಬ ಮುಸ್ಲಿಮ್ ಹಿರಿಯರನ್ನು ಬೇಟಿಯಾಗುವುದು ನಡೆದಿದೆ. ಆತನು ಜ್ಞಾನದಲ್ಲಿ ನಿಪುಣನೆಂದು ಹೆಸರುವಾಸಿಯಾದವನು. ಅಷ್ಟೇ ಅಲ್ಲದೆ ಇಸ್ಲಾಮ್ ಸಮಾಜದಲ್ಲಿ ಒಂದು ಆಧ್ಯಾತ್ಮಿಕ ಸಂಸ್ಥೆಯನ್ನು ಏರ್ಪಡಿಸಿ ಇಸ್ಲಾಮ್ ಜ್ಞಾನವನ್ನು ಬೋಧಿಸುವವನು. ಆತನು ಬೈಬಲ್, ಖುರಾನ್ ಕಡೆಯಿಂದ ಎಷ್ಟೋ ವಿಷಯಗಳಲ್ಲಿ ಡಿಬೇಟ್‌ಗಳಲ್ಲಿ ಪಾಲ್ಗೊಂಡು ಇದೇ ಸತ್ಯ ಎಂದು ವಾದಿಸುತ್ತಿದ್ದನು. ಆತನನ್ನು ಬಹಳಜನ ಇಸ್ಲಾಮ್‌ನಲ್ಲಿ ಬಹಳ ತಿಳಿದವನೆಂದು ಹೊಗಳುತ್ತಿರುತ್ತಾರೆ. ಅಂತಹ ದೊಡ್ಡ ಜ್ಞಾನಿಯ ಹತ್ತಿರಕ್ಕೆ ಹೋಗಿ ಬೈಬಲ್ ಗ್ರಂಥದಲ್ಲಿ ಯೇಸು ಪ್ರಭುಗಳು ಎಷ್ಟೋ ಮಹಿಮೆಗಳು ಮಾಡಿದ್ದಾರೆ. ಕುರುಡರಿಗೆ ದೃಷ್ಠಿಯನ್ನು ಕೊಟ್ಟಿದ್ದಾನೆ. ಕುಷ್ಠ ರೋಗಿಯನ್ನು ಗುಣಪಡಿಸಿದ್ದಾನೆ. ಖುರ್‌ಆನ್ ಗ್ರಂಥದಲ್ಲಿ ಮುಹಮ್ಮದ್ ಪ್ರವಕ್ತರು ಅಂತಹ ಮಹಿಮೆಗಳು ಮಾಡಿದಂತೆ ಎಲ್ಲಿಯೂ ಇಲ್ಲವಲ್ಲ! ಯೇಸು ಪ್ರವಕ್ತ ಮಹಿಮೆಗಳನ್ನು ಮಾಡಿ ಮನುಷ್ಯರನ್ನು ರೋಗಗಳಿಂದ ಸ್ವಸ್ಥತೆ ಪಡಿಸಿದಾಗ, ಮುಹಮ್ಮದ್ ಪ್ರವಕ್ತರವರು ಏಕೆ ಮಹಿಮೆಗಳು ಮಾಡಲಾರದೆ ಹೋಗಿದ್ದಾನೆ? ಏಕೆ ಇತರರ ರೋಗಗಳನ್ನು ಸ್ವಸ್ಥತೆ ಮಾಡಲಾರದೆಹೋಗಿದ್ದಾನೆ? ಈ ಸಂಶಯಕ್ಕೆ ನನಗೆ ಅರ್ಥವಾಗುವಂತೆ ವಿವರಿಸಿ ಹೇಳಿರೆಂದು ಸವಿನಯವಾಗಿ ಕೇಳಿದ್ದೇನೆ.

ಆಗ ಆತನು ಸ್ವಲ್ಪವೂ ಹಿಂದೆಮುಂದೆ ನೋಡದೆ ತಕ್ಷಣ ಉತ್ತರ ಹೇಳಿದ್ದಾನೆ. ಸೂರಾ ಮೂರರಲ್ಲಿ 49ನೇ ಆಯತ್‌ನ್ನು ಹೇಳಿದ್ದಾನೆ. ಅದರಲ್ಲಿ ಮುಹಮ್ಮದ್ ಪ್ರವಕ್ತರು ಕೂಡಾ ಮಹಿಮೆಗಳು ಮಾಡಿ ತೋರಿಸಿದಂತೆ ಕುರುಡರಿಗೆ ದೃಷ್ಠಿ ಕೊಟ್ಟಂತೆ, ಕುಷ್ಠರೋಗಿಗೆ ಸ್ವಸ್ಥತೆ ಕೈಗೂಡಿಸಿದಂತೆ ಇದೆಯೆಂದು ಹೇಳಿದ್ದಾರೆ. ಅದೇ ಖುರ್‌ಆನ್ ಗ್ರಂಥದಲ್ಲಿ ಒಂದುಕಡೆ ಪ್ರವಕ್ತ 'ಯಾವ ಮಹಿಮೆ ಇಲ್ಲದ ಸಾಧಾರಣ ವ್ಯಕ್ತಿ' ಎಂದು ಆತನು 'ಜ್ಞಾನವನ್ನು ಹೇಳಿ ಎಚ್ಚರಿಸುವವನೆಂದು'

**ಹೇಳಿದ್ದಾರೆ. ಇದರಲ್ಲಿ ಯಾವುದು ನಿಜವೆನ್ನುತ್ತೀರಾ? ದಯೆಮಾಡಿ ತಿಳಿಸಿರೆಂದು ಕೇಳುತ್ತಿದ್ದೇನೆ?**

**ಉತ್ತರ :–** ದೇವರ ದೃಷ್ಠಿ ಬೇರೆ, ಮನುಷ್ಯನ ದೃಷ್ಠಿ ಬೇರೆ. ನಮ್ಮ ದೃಷ್ಠಿಯಲ್ಲಿ ಅನೇಕ ಲೋಪಗಳಿರಬಹುದು. ಎದುರುಗಡೆ ಇರುವುದು ಒಂದಾದರೆ ನಮಗೆ ತಿಳಿಯುವುದು ಮತ್ತೊಂದು ಇರುತ್ತದೆ. ಅಜ್ಞಾನಿಗಳು ಕೂಡಾ ನಮ್ಮ ದೃಷ್ಠಿಯಲ್ಲಿ ಜ್ಞಾನಿಗಳಾಗಿ ಕಾಣಿಸಬಹುದು. ಆದರೆ ದೇವರ ದೃಷ್ಠಿಯಲ್ಲಿ ಜ್ಞಾನಿಗಳು ಜ್ಞಾನಿಗಳಾಗಿಯೇ, ಅಜ್ಞಾನಿಗಳು ಅಜ್ಞಾನಿಗಳಾಗಿಯೇ ಕಾಣಿಸುತ್ತಿರುತ್ತಾರೆ. ಮನುಷ್ಯರು ಅಸತ್ಯಗಳು ಹೇಳಿದರೂ ಮನುಷ್ಯರು ಸತ್ಯವೆಂದು ನಂಬುತ್ತಾರೆ. ಮನುಷ್ಯರು ಹೇಳುವುದು ಸತ್ಯವಾ ಅಸತ್ಯವಾ ಎಂದು ದೇವರು ತಿಳಿಯಬಲ್ಲನು. ಆದ್ದರಿಂದ ಮನುಷ್ಯರು ಸಾಧ್ಯವಿರುವವರೆಗು ದೇವರ ಮಾತುಗಳನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಪ್ರಯತ್ನ ಮಾಡಬೇಕು. ಆದರೆ ಮನುಷ್ಯ ದೇವರ ಮಾತುಗಳನ್ನು ಪಕ್ಕಕ್ಕಿಟ್ಟು ಮನುಷ್ಯನ ಮಾತನ್ನೇ ಕೇಳುತ್ತಿದ್ದಾನೆ. ಮೇಲಾಗಿ 'ನಮ್ಮ ಹಿರಿಯರು ಹೇಳಿದ ಮಾತನ್ನು ನಾವು ಕೇಳಬೇಕು' ಎಂದು ಹೇಳುತ್ತಿದ್ದಾರೆ. ಅವರ ದೃಷ್ಠಿಯಲ್ಲಿ ಅವರ ಹಿರಿಯರು ಜ್ಞಾನ ಚೆನ್ನಾಗಿ ತಿಳಿದವರೆಂದು ಅಂದುಕೊಳ್ಳುತ್ತಿದ್ದಾರೆ. ಹಾಗೆ ಮನುಷ್ಯರು ಗೊಂದಲಪಡುವ ಅವಕಾಶ ವಿದೆಯೆಂದು ಮನುಷ್ಯರನ್ನು ಎಚ್ಚರಿಸುತ್ತಾ ಅಲ್ಲಾಹ್ (ದೇವರು) ಖುರ್‌ಆನ್ ಗ್ರಂಥದಲ್ಲಿಯೇ ಸೂರಾ ಆರರಲ್ಲಿ, ಆಯತ್ 91 ರಲ್ಲಿ **(6–91) "ನಿಮಗಾಗಲಿ, ನಿಮ್ಮ ಹಿರಿಯರಿಗಾಗಲಿ ತಿಳಿಯದ ಎಷ್ಟೋ ವಿಷಯಗಳು ಇದರಲ್ಲಿ ನಿಮಗೆ ತಿಳಿಸಲ್ಪಟ್ಟಿವೆ" ಎಂದು ಇದೆ.** ಅದರ ಪ್ರಕಾರ ಮನುಷ್ಯರು ಯಾರನ್ನಾದರೆ ಹಿರಿಯರು, ಜ್ಞಾನಿಗಳು, ಗುರುಗಳು, ಬೋಧಕರೆಂದು ಅಂದುಕೊಳ್ಳುತ್ತಿದ್ದಾರೊ ಅವರಿಗೂ ಕೂಡಾ ದೈವಜ್ಞಾನ ವಿಷಯಗಳು ತಿಳಿಯದೆಂದು ದೇವರು ತನ್ನ ಬೋಧನೆಯಲ್ಲಿ ತಿಳಿಸಿದ್ದಾನೆ. ಸೂರಾ 17, ಆಯತ್ 85ರಲ್ಲಿ **(17–85) "ಆತ್ಮವನ್ನು ಕುರಿತು ದೇವರಿಗೇ ತಿಳಿದಿದೆ. ದೇವರಿಗೆ ಹೊರತುಪಡಿಸಿ ಯಾರಿಗೂ ತಿಳಿದಿಲ್ಲ. ದೇವರು ಆತ್ಮವನ್ನು ಕುರಿತು, ಆತ್ಮ ಜ್ಞಾನವನ್ನು ಕುರಿತು ತನ್ನ ಪ್ರವಕ್ತರಿಗೆ**

**ಕೂಡಾ ಹೇಳಲಿಲ್ಲ"** ಎಂದು ಇದೆ. ಅಷ್ಟೇಅಲ್ಲದೆ ಸೂರಾ ಮೂರು, ಆಯತ್ ಏಳರಲ್ಲಿ (3–7) ರಲ್ಲಿ **"ದೇವರ ಜ್ಞಾನ ದೇವರಿಗೆ ಹೊರತು ಇತರ ಮನುಷ್ಯರಿಗೆ ಯಾರಿಗೂ ಗೊತ್ತಿಲ್ಲ"** ಎಂದು ಹೇಳಿರುವುದರಿಂದ ಮನುಷ್ಯರು ಹೇಳಿದ ಜ್ಞಾನವನ್ನು ಕೇಳಿ ಅದೇ ನಿಜವಾದ ಜ್ಞಾನ ಎಂದು ಅಂದುಕೊಳ್ಳುವುದು ದೊಡ್ಡ ಮೋಸವಾಗುತ್ತದೆ. ಆದ್ದರಿಂದ ದೇವರು ಹೇಳಿದ ಜ್ಞಾನವನ್ನು ದೈವಗ್ರಂಥಗಳಿಂದ ಓದಿ, ನಿನ್ನ ಬುದ್ಧಿಯನ್ನು ಉಪಯೋಗಿಸಿ ಸತ್ಯಾಸತ್ಯ ವಿಚಕ್ಷಣೆಯಿಂದ ಆಲೋಚಿಸಿ ನಿರ್ಣಯಿಸಿಕೊಂಡರೂ, ಸ್ವಲ್ಪಮಟ್ಟಿಗೆ ಪ್ರತಿ ಮನುಷ್ಯನಿಗು ಸತ್ಯ ತಿಳಿಯಬಲ್ಲದು.

ಈಗ ಅಸಲು ವಿಷಯಕ್ಕೆ ಬರೋಣ. ನೀವು ಇಸ್ಲಾಮ್‌ನಲ್ಲಿ ದೊಡ್ಡ ಜ್ಞಾನಿಯಾದ ವ್ಯಕ್ತಿಯನ್ನು ಮುಹಮ್ಮದ್ ಪ್ರವಕ್ತರವರು ತನ್ನ ಜೀವನದಲ್ಲಿ ಯೇಸುಪ್ರಭುವು ತೋರಿಸಿದಂತೆ ಮಹಿಮೆಯನ್ನು ತೋರಿಸಿದ್ದಾನಾ! ಎಂದು ಕೇಳಿದ್ದೀಯಾ. ಆಗ ಆತನು ಸೂರಾ ಮೂರು, ಆಯತ್ 49ರಲ್ಲಿ ನೋಡಿರೆಂದಿದ್ದಾನೆ. ನಾವು ಈಗ ಅದೇ ಆಯತ್‌ನ್ನು ತೆಗೆದುಕೊಂಡು ನೋಡೋಣ. **(3–49) ಇನ್ನು ಆತನು ಇಸ್ರಾಯಿಲು ವಂಶಿಯರ ಕಡೆಗೆ ಪ್ರವಕ್ತನಾಗಿ ಕಳಿಸಲ್ಪಡುತ್ತಾನೆ. (ಆಗ ಅವರನ್ನು ಉದ್ದೇಶಿಸಿ ಆತನು ಹೀಗೆ ಹೇಳುತ್ತಾನೆ) "ನಾನು ನಿಮ್ಮ ಹತ್ತಿರಕ್ಕೆ ನಿಮ್ಮ ಪ್ರಭುವಿನ ಹತ್ತಿರದಿಂದ ಸೂಚನೆಯನ್ನು ತೆಗೆದುಕೊಂಡುಬಂದಿದ್ದೇನೆ. ನಾನು ನಿಮಗೋಸ್ಕರ ಪಕ್ಷಿ ಆಕಾರವಿರುವ ಮಣ್ಣಿನ ಗೊಂಬೆಯನ್ನು ತಯಾರು ಮಾಡಿ ಅದರಲ್ಲಿ ಊದುತ್ತೇನೆ. ಅಲ್ಲಾಹ್ ಆಜ್ಞೆಯಿಂದ ಅದು ಪಕ್ಷಿ ಆಗುತ್ತದೆ. ಇನ್ನೂ ಅಲ್ಲಾಹ್ ಆಜ್ಞೆಯಿಂದ ಹುಟ್ಟುವ ಕುರುಡನನ್ನು, ಕುಷ್ಠ ರೋಗಿಯನ್ನು ಗುಣ ಪಡಿಸುತ್ತೇನೆ. ಮೃತರನ್ನು ಬದುಕಿಸುತ್ತೇನೆ. ನೀವು ತಿನ್ನುವವುಗಳನ್ನು, ನೀವು ನಿಮ್ಮ ಮನೆಯಲ್ಲಿ ನೆಲೆ ಮಾಡಿದವುಗಳನ್ನು ಕುರಿತು ಕೂಡಾ ಹೇಳುತ್ತೇನೆ. ನೀವು ವಿಶ್ವಾಸಿಸುವವರಾದರೆ ಇದರಲ್ಲಿ ನಿಮಗೋಸ್ಕರ ದೊಡ್ಡ ಸೂಚನೆ ಇದೆ".**

ಈ ವಾಕ್ಯದಲ್ಲಿ ಅವರು ಹೇಳುವುದು ಮುಹಮ್ಮದ್ ಪ್ರವಕ್ತರು ಕೂಡಾ ದೇವರ ಹತ್ತಿರದಿಂದ ಸೂಚನೆ (ಮಹಿಮೆ)ಯನ್ನು ತೆಗೆದುಕೊಂಡು ಬಂದಿದ್ದೇನೆ ಎಂದು ಹೇಳಿದ್ದಾನೆಂದು, ಅಷ್ಟೇ ಅಲ್ಲದೆ ಆತನು ಕುರುಡನನ್ನು ಗುಣ ಪಡಿಸುತ್ತೇನೆಂದು, ಹಾಗೇ ಕುಷ್ಠ ರೋಗಿಯನ್ನು ಕೂಡಾ ಗುಣಪಡಿಸುತ್ತೇನೆಂದು ಹೇಳಿದಂತೆ ಈ ವಾಕ್ಯದಲ್ಲಿ ತೋರಿಸುತ್ತಿದ್ದಾರೆ. ವಾಕ್ಯದಲ್ಲಿ ಆ ವಿಷಯಗಳಿರುವುದು ವಾಸ್ತವವೇ. ಆದರೆ ಇಲ್ಲಿ ದೊಡ್ಡ ತಪ್ಪು ನಡೆದಿದೆ ಏನೆಂದರೆ! 'ಈ ಮಾತುಗಳು ಮುಹಮ್ಮದ್ ಪ್ರವಕ್ತರು ಹೇಳಿದ್ದಾರೆ' ಎನ್ನುವುದು ದೊಡ್ಡ ತಪ್ಪು. ಆ ಮಾತುಗಳನ್ನು ಪ್ರವಕ್ತರವರು ಯಾವುದು ಹೇಳಲಿಲ್ಲ. ಖುರ್‌ಆನ್ ಗ್ರಂಥವನ್ನು ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರವರಿಗೆ ಹೇಳುವಾಗ ಯೇಸು ವಿಷಯವನ್ನು ಮತ್ತು ಯೇಸು ತಾಯಿ ಮರಿಯಮ್ಮನ ವಿಷಯವನ್ನು ತಿಳಿಸುತ್ತಾ ಮೂರನೆ ಸೂರಾದಲ್ಲಿ 45ನೇ ಆಯತ್‌ನಿಂದ 50 ನೇ ಆಯತ್‌ವರೆಗು ಹೇಳಿದ ವಿಷಯ ಇಲ್ಲಿ ಇದೆ. 45ನೇ ವಾಕ್ಯದಿಂದ ಓದುತ್ತಾ ಬಂದರೇ 49ನೇ ವಾಕ್ಯದಲ್ಲಿ ಯಾರನ್ನು ಕುರಿತು ಜಿಬ್ರಯೇಲ್ ಹೇಳಿದ್ದಾನೋ ತಿಳಿಯಬಲ್ಲದು. ಆದ್ದರಿಂದ ನಾವು ಒಂದುಸಲ 45ನೇ ವಾಕ್ಯದಿಂದ ಓದಿ ನೋಡೋಣ. **(3–45) ದೈವ ದೂತರು "ಓ ಮರ್ಯಮ್! ಅಲ್ಲಾಹ್ ನಿನಗೆ ತನ್ನ ವಾಕ್ಕುಗೆ ಸಂಬಂಧಿಸಿದ ಶುಭವಾರ್ತೆಯನ್ನು ಕೇಳಿಸುತ್ತಿದ್ದಾನೆ. ಆತನ ಹೆಸರು ಮಸೀಹ್ ಈಸಾ ಬಿನ್ ಮರಿಯಮ್. ಆತನು ಇಹ ಪರಗಳಲ್ಲಿ ಗೌರವ ನೀಯನಾಗುತ್ತಾನೆ. ಆತನು ಅಲ್ಲಾಹ್ ಸಾಮಿಪ್ಯವನ್ನು ಹೊಂದಿದವರಲ್ಲಿ ಒಬ್ಬನು." (46) "ಆತನು ಉಯ್ಯಾಲೆಯಲ್ಲಿ ಇರುವಾಗ, ದೊಡ್ಡವನಾದಾಗಲೂ ಪ್ರಜೆಗಳೊಂದಿಗೆ ಮಾತನಾಡುತ್ತಾನೆ. ಇನ್ನೂ ಆತನು ಒಳ್ಳೆಯ ಪ್ರವರ್ತನೆ ಇರುವವನಾಗಿ ಇರುತ್ತಾನೆ" ಎಂದು ಹೇಳಿದಾಗ (47) ಆಕೆ "ನನ್ನ ಪ್ರಭೂ! ನನಗೆ ಮಗು ಹೇಗೆ ಹುಟ್ಟುತ್ತಾನೆ? ನನ್ನನ್ನು ಯಾವ ಮನುಷ್ಯ ತಾಕಲಿಲ್ಲವೇ" ಎಂದಳು. "ಹಾಗೆಯೇ ನಡೆಯುತ್ತದೆ. ಅಲ್ಲಾಹ್ ತಾನು ಕೋರಿರುವುದು ಹುಟ್ಟಿಸುತ್ತಾನೆ. ಆತನು ಏನಾದರೂ ಕೆಲಸ ಮಾಡುವುದಕ್ಕೆ ಸಂಕಲ್ಪಿಸಿಕೊಂಡು "ಆಗಿಹೋಗಲಿ" ಎಂದು ಹೇಳಿದರೆ ಸಾಕು ಅದು ಆಗಿಹೋಗುತ್ತದೆ" ಎಂದು ದೈವದೂತನ ಮೂಲಕ ಸಮಾಧಾನ ಲಭಿಸಿದೆ. (48) "ಅಲ್ಲಾಹ್ ಆತನಿಗೆ ಅಕ್ಷರ**

**ಜ್ಞಾನವನ್ನು, ವಿವೇಕವನ್ನು, ತೌರಾತು, ಇಂಜೀಲು ಗ್ರಂಥಗಳ ಜ್ಞಾನವನ್ನು ಕಲಿಸುತ್ತಾನೆ" (ಎಂದು ಕೂಡಾ ದೈವದೂತರು ತಿಳಿಸಿದ್ದಾರೆ).**

ಅಷ್ಟೇಅಲ್ಲದೆ ಇನ್ನೂ ಸ್ವಲ್ಪ ವಿಷಯವನ್ನು 49ನೇ ವಾಕ್ಯದಲ್ಲಿ ಹೇಳುತ್ತಿದ್ದಾನೆ ನೋಡಿರಿ. (3–49) ಇನ್ನೂ ಆತನು ಇಸ್ರಾಯಿಲು ವಂಶೀಯರ ಕಡೆಗೆ ಪ್ರವಕ್ತನಾಗಿ ಕಳಿಸಲ್ಪಡುತ್ತಾನೆ. (ಇಸ್ರಾಯಿಲ್‌ನನ್ನು ಉದ್ದೇಶಿಸಿ ಆತನು ಹೀಗೆ ಹೇಳುತ್ತಾನೆ.) ನಾನು ನಿಮ್ಮ ಹತ್ತಿರಕ್ಕೆ ನಿಮ್ಮ ಪ್ರಭು ಹತ್ತಿರದಿಂದ ಸೂಚನೆಯನ್ನು ತೆಗೆದುಕೊಂಡು ಬಂದಿದ್ದೇನೆ. (ಎಂದು ಹೇಳಿರುವುದು ಯಾರು? ಎನ್ನುವುದು ಪ್ರಶ್ನೆ.) ಯಾವ ಕೋನದಿಂದ ನೋಡಿದರೂ ಇಲ್ಲಿ ಯೇಸುನನ್ನು ಕುರಿತು ಆತನ ತಾಯಿಗೆ ದೇವದೂತರು ಹೇಳಿದಂತೆ ಇದೆಯಾಗಲಿ ಮುಹಮ್ಮದ್ ಪ್ರವಕ್ತನನ್ನು ಕುರಿತು ಹೇಳಿದಂತೆ ಇಲ್ಲ. ಸ್ವಲ್ಪ ಬುದ್ಧಿ ಇರುವವರಿಗು ಕೂಡಾ ಈ ವಿಷಯ ಅರ್ಥವಾಗುವಂತೆ ಇದೆ. ಆದರೆ ಎಷ್ಟೋ ದೊಡ್ಡ ಬುದ್ಧಿ ಇರುವವರು ಸಹಿತ ಇದು ಪ್ರವಕ್ತ ವಿಷಯ ಎಂದು ಹೇಳುತ್ತಿದ್ದಾರೆ. ಅಂದರೇ ಅವರು ಈ ವಿಷಯದಲ್ಲಿ ತಪ್ಪಾಗಿಯಾದರೂ ಅರ್ಥಮಾಡಿಕೊಂಡಿರಬೇಕು, ಅಥವಾ ಸತ್ಯ ತಿಳಿದರೂ ಉದ್ದೇಶಪೂರ್ವಕವಾಗಿ ಅಸತ್ಯವನ್ನು ಹೇಳುತ್ತಿರಬೇಕು. ನನ್ನನ್ನು ಕೇಳಿದರೆ ತಿಳಿಯದೆ ಹೋಗುವಷ್ಟು ರಹಸ್ಯ ಏನು ಈ ವಾಕ್ಯದಲ್ಲಿ ಇಲ್ಲ. ಇದು ಯೇಸುನನ್ನು ಕುರಿತು ಹೇಳಿರುವುದೆಂದು ಮೇಲ್ನೋಟಕ್ಕೆ ಕಾಣಿಸುವಂತಿದೆ. ಈ ವಾಕ್ಯದಲ್ಲಿ "ದೇವರ ಆಜ್ಞೆಯಿಂದ ಕುರುಡನನ್ನು, ಕುಷ್ಠರೋಗಿಯನ್ನು ಗುಣ ಪಡಿಸುತ್ತಾನೆ. ಮೃತನನ್ನು ಸಜೀವವಾಗಿ ಎಬ್ಬಿಸುತ್ತಾನೆ" ಎಂದು ಇದೆ ಅಲ್ಲವೆ! ಆ ಸೂಚನೆಗಳು (ಮಹಿಮೆಗಳು) ಯೇಸು ಜೀವನದಲ್ಲಿ ನಡೆದಿವೆಯಾಗಲಿ, ಮುಹಮ್ಮದ್ ಪ್ರವಕ್ತರವರ ಜೀವನದಲ್ಲಿ ನಡೆಯಲಿಲ್ಲ.

ಖುರ್‌ಆನ್ ಗ್ರಂಥದಲ್ಲಿ ಸೂರಾ 13, ಆಯತ್ 7ರಲ್ಲಿ ಈ ವಿಧವಾಗಿ ಹೇಳಿದ್ದಾರೆ ನೋಡಿರಿ. **(13–7) "ಆತನಮೇಲೆ ಪ್ರಭುವು (ದೇವರು) ಕಡೆಯಿಂದ ಏನಾದರೂ ಸೂಚನೆ (ಮಹಿಮೆ) ಏಕೆ ಅವತರಿಸಲಿಲ್ಲ." ಎಂದು ಅವಿಶ್ವಾಸಿಗಳು ಅನ್ನುತ್ತಿದ್ದಾರೆ. ಓ ಪ್ರವಕ್ತಾ! ವಾಸ್ತವಕ್ಕೆ ನೀನು ಅವರನ್ನು ಎಚ್ಚರಿಸುವವನು ಮಾತ್ರವೇ.**

**ಪ್ರತಿ ಜಾತಿಗು ಮಾರ್ಗದರ್ಶಕನು ಅಂತೂ ಒಬ್ಬನಿದ್ದಾನೆ"**. ಎಂದು ಹೇಳಲ್ಪಟ್ಟಿದೆ ಅಲ್ಲವೆ! ಇದರಲ್ಲಿ ಮಹಿಮೆ ವಿಷಯ ಪ್ರವಕ್ತನನ್ನು ಕೇಳುವವರು ಕೆಲವರು ಇದ್ದಾರೆ. ಆದರೆ ಪ್ರವಕ್ತರವರು ಅವರಿಗೆ ಜ್ಞಾನ ಹೇಳಿ ಎಚ್ಚರಿಸುವವನೇ ಹೊರತು ಇತರ ಮಹಿಮೆಗಳು ತೋರಿಸುವವನು ಅಲ್ಲ. ಪ್ರತಿ ಜಾತಿಗು ಮಾರ್ಗದರ್ಶಕನು ಒಬ್ಬನಿದ್ದಾನೆ. ಹಾಗೇ ನೀನು ಪ್ರಜೆಗಳಿಗೆ ಜ್ಞಾನ ಮಾರ್ಗ ದರ್ಶಕನೆಂದು ಹೇಳಿದ್ದಾರೆ. ಈ ವಾಕ್ಯವನ್ನು ನೋಡಿದರೆ ಪ್ರವಕ್ತನಿಗು ದೇವರ ಸೂಚನೆಗಳಿಗು (ಮಹಿಮೆಗು) ಸಂಬಧ ಇಲ್ಲವೆಂದು ಮಹಿಮೆಗಳು ಮಾಡುವವನು ಪ್ರವಕ್ತ ಅಲ್ಲವೆಂದು, ಪ್ರವಕ್ತ ಪ್ರಜೆಗಳಿಗೆ ಜ್ಞಾನ ದರ್ಶಕನಾಗಿ ಇರುತ್ತಾನೆಂದು ಹೇಳಿದ್ದಾರೆ.

ಇದೆಲ್ಲವೂ ಓದಿದ ನಂತರ ಮುಹಮ್ಮದ್ ಪ್ರವಕ್ತನು ಮಹಿಮೆಗಳು ಮಾಡುವವನೆಂದು, ಆತನಿಗು ಮಹಿಮೆಗಳಿಗು ಸಂಬಂಧವಿದೆಯೆಂದು ಹೇಳುವುದಾಗಲಿ ತಪ್ಪಾಗುತ್ತದೆ. ಖುರ್‌ಆನ್‌ನಲ್ಲಿ ಅಲ್ಲಾಹ್ ಮಾತನ್ನು ಅತಿಕ್ರಮಿಸಿ ಮಾತನಾಡಿದಂತಾಗುತ್ತದೆ. ಮೂರನೆ ಸೂರಾದಲ್ಲಿ 49ನೇ ವಾಕ್ಯದಲ್ಲಿ ಸೂಚನೆಗಳು ನಡೆಯುತ್ತವೆಯೆಂದು ಹೇಳಿರುವುದು ಮರಿಯಮ್ಮ ಕುಮಾರನಾದ ಯೇಸುಪ್ರಭುವನ್ನು ಕುರಿತಾಗಿಯೇ ಹೊರತು ಇತರರನ್ನು ಕುರಿತು ಅಲ್ಲ. ಅಲ್ಲಿ ಹೇಳಿದಂತೇ ಯೇಸು ಜೀವನದಲ್ಲಿ "ಕುರುಡನನ್ನು, ಕುಷ್ಠರೋಗಿಯನ್ನು ಸ್ವಸ್ಥತೆ ಮಾಡುವುದು, ಮೃತನನ್ನು ಎಬ್ಬಿಸುವುದು ನಡೆದಿದೆ". ಅಂತಹ ಸಂಘಟನೆಗಳು ಮುಹಮ್ಮದ್ ಜೀವನದಲ್ಲಿ ಒಂದು ಕೂಡಾ ನಡೆಯಲಿಲ್ಲ. 3–49ನೇ ಆಯತ್‌ನನ್ನು ಬುದ್ದಿಗಿರುವ ವಿಚಕ್ಷಣಾ ಶಕ್ತಿಯಿಂದ ಪರಿಶೀಲಿಸಿದರೆ ಸತ್ಯಾ ಸತ್ಯ ತಿಳಿಯಬಲ್ಲದು. ವಾಕ್ಯದಲ್ಲಿನ ಸತ್ಯಾಸತ್ಯ ತಿಳಿಯುವುದಕ್ಕೆ 45ನೇ ವಾಕ್ಯದಿಂದ 46, 47, 48 ವಾಕ್ಯಗಳನ್ನು ಓದಿದರೆ 49ನೇ ವಾಕ್ಯ ಯೇಸುನನ್ನು ಕುರಿತು ಹೇಳಿರುವುದೆಂದು ಸುಲಭವಾಗಿ ತಿಳಿದುಹೋಗುತ್ತಿದೆ. ದೈವಗ್ರಂಥದಲ್ಲಿನ ಜ್ಞಾನ ವಾಕ್ಯದಲ್ಲಿನ ಸತ್ಯ ತಿಳಿಯುವುದಕ್ಕೆ ಮನುಷ್ಯನಿಗೆ ಬುದ್ದಿವೊಂದರ ವಿಚಕ್ಷಣಾ ಶಕ್ತಿ ತಪ್ಪದೆ ಅಗತ್ಯ. ಪ್ರಪಂಚ ವಿಷಯದಲ್ಲಿ ಎಷ್ಟೋ ವಿಚಕ್ಷಣೆಯನ್ನು ಉಪಯೋಗಿಸುವವರು ದೇವರ ಜ್ಞಾನವಾಕ್ಯಗಳಲ್ಲಿ ಕುರುಡರಂತೆ ಮಾತ ನಾಡುವುದು ವಿಸ್ಮಯವೆನಿಸುತ್ತದೆ.

**15) ಪ್ರಶ್ನೆ :– ಈ ಮಧ್ಯ ಕಾಲದಲ್ಲಿ ಮುಸ್ಲಿಮ್‌ರಲ್ಲಿ ಪ್ರತ್ಯೇಕವಾಗಿರುವ ಒಂದು ವರ್ಗದವರು ನನ್ನೊಂದಿಗೆ ಬೇಟಿಯಾಗುವುದು ನಡೆದಿದೆ. ಮುಸ್ಲಿಮ್‌ರಲ್ಲಿ 74 ಗುಂಪುಗಳು ಇವೆ. ಅದರಲ್ಲಿ ಒಂದು ಗುಂಪಿನವರು ಬೇಟಿಯಾಗಿದ್ದಾರೆ. ಅವರು ಆಫ್ಘನಿಸ್ಥಾನ್‌ನಲ್ಲಿ (ತಾಲಿಬಾನರಂತೆ) ಅವರ ವೇಷಧಾರಣೆ ಇದೆ. ನಾವೇ ನಿಜವಾದ ಮುಸ್ಲಿಮ್‌ರು ಎಂದು ಉಳಿದವರು ಸರಿಯಾದ ಮುಸ್ಲಿಮ್‌ರು ಅಲ್ಲವೆಂದು ಹೇಳುತ್ತಿದ್ದರು. ನಾವು ನಿವಾಸಿಸುವ ಪ್ರಾಂತದಲ್ಲಿ ಅಂತಹವರು ಬಹುಸ್ವಲ್ಪ ಜನರು ಮಾತ್ರವೇ ಇದ್ದಾರೆ. ಅವರು ನೀವು ಬರೆದ "ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು" ಎನ್ನುವ ಗ್ರಂಥದಲ್ಲಿ ಒಂದು ಪುಟವನ್ನು ನೋಡಿ ಅದರಲ್ಲಿ "ಪ್ರವಕ್ತರವರು ಇನ್ನೂ ಸ್ವಲ್ಪ ಕಾಲ ಬದುಕಿದ್ದರೆ ಖುರ್‌ಆನ್ ಜ್ಞಾನ ಇನ್ನೂ ಸ್ವಲ್ಪ ತಿಳಿದಿರುತ್ತಿತ್ತು. ಆತನು ವ್ಯಾದಿಗ್ರಸ್ಥನಾಗಿ ಹನ್ನೊಂದು ದಿನಗಳಿಗೇ ಮರಣಿಸುವುದರಿಂದ ನಮಗೆ ತಿಳಿಯಬೇಕಾದ ಜ್ಞಾನ ತಿಳಿಯದೆ ಹೋಗಿದೆ. ಆತನು ಬದುಕಿದ್ದರೆ ಮತ್ತಷ್ಟು ಜ್ಞಾನ ತಿಳಿದಿರುತ್ತಿತ್ತೇನೊ" ಎಂದು ಬರೆದಿದ್ದಾರೆ. ಹಾಗೆ ಬರೆಯುವುದು ತಪ್ಪೆಂದು ಪ್ರವಕ್ತರವರು ಬದುಕಿರುವಾಗಲೇ ಖುರಾನ್ ಜ್ಞಾನ ಸಂಪೂರ್ಣವಾಗಿ ಹೇಳಲ್ಪಟ್ಟಿದೆಯೆಂದು ಅವರೆಂದಿದ್ದಾರೆ. ಅದಕ್ಕೆ ನಾನು ಬದಲು ಮಾತನಾಡುತ್ತಾ ಪ್ರವಕ್ತರವರು ಮರಣಿಸುವ ವಿಷಯ ಇತ್ತ ಪ್ರಜೆಗಳಿಗಾಗಲಿ ಅತ್ತ ಜಿಬ್ರಯೇಲ್‌ಗೆ ಆಗಲಿ ಗೊತ್ತಿಲ್ಲ. ಜೀವನ ಚರಿತ್ರೆಯನ್ನು ನೋಡಿದರೆ ಖುರ್‌ಆನ್ ಜ್ಞಾನ ಮುಗಿದು ಹೋಗಿದೆಯೆಂದು ಪ್ರವಕ್ತರವರು ಹೇಳಿದಂತೆ ಎಲ್ಲಿಯೂ ಇಲ್ಲ. ಜಿಬ್ರಯೇಲ್ ಕೂಡಾ ತಾನು ಹೇಳುವ ಬೋಧನೆ ಮುಗಿದುಹೋಗಿದೆಯೆಂದು ಎಲ್ಲಿಯೂ ಹೇಳಲಿಲ್ಲ. ಹಾಗಿರುವಾಗ ಖುರಾನ್ ಜ್ಞಾನಸಂಪೂರ್ಣವಾಗಿ ಹೇಳಲ್ಪಟ್ಟಿದೆಯೆಂದು ಪ್ರವಕ್ತ ಹೇಳದಿದ್ದರೂ ಹೇಳಿದ್ದಾನೆಂದು ಹೇಳುವುದೇನೆಂದು ಕೇಳಿದ್ದೇನೆ. ಆದರೂ ಅವರು ಅವರಮಾತನ್ನೇ ಗಟ್ಟಿಯಾಗಿ ಹೇಳುತ್ತಿದ್ದಾರೆ. ಈ ವಿಷಯವನ್ನು ಕುರಿತು ಸತ್ಯಾಸತ್ಯ ಏನೋ ತಿಳಿಸಿರೆಂದು ಸವಿನಯವಾಗಿ ಕೇಳುತ್ತಿದ್ದೇನೆ?**

**ಉತ್ತರ:–** ಪ್ರವಕ್ತರವರಿಂದ ಪ್ರಪಂಚಕ್ಕೆ ಖುರ್‌ಆನ್ ಗ್ರಂಥ ಜ್ಞಾನ ಲಭಿಸಿದೆ. ಆಕಾಶದಿಂದ ಇಳಿದುಬಂದ ಜಿಬ್ರಯೇಲ್ ಜ್ಞಾನವನ್ನು ಬೋಧಿಸಿದರೂ, ಅದನ್ನು

ಕೇಳಿಸಿಕೊಂಡ ಪ್ರವಕ್ತ ಬಂದು ಪ್ರಜೆಗಳಿಗೆ ತಿಳಿಸುವುದರಿಂದ ದೈವಜ್ಞಾನ ಪ್ರಜೆಗಳಿಗೆ ತಿಳಿದಿದೆ. ಸೂರ್ಯನು ಆಕಾಶದಿಂದ ಇಳಿದುಬಂದು ತನಗೆ ತಿಳಿದ ಜ್ಞಾನವನ್ನು ಜಿಬ್ರಯೇಲ್ ಎನ್ನುವ ಹೆಸರಿನಿಂದ ಹೇಳಿದ್ದಾನೆ. ನಂತರ ಪ್ರವಕ್ತರ ಮೂಲಕ ಅದು ಹೊರಗಿನ ಪ್ರಪಂಚಕ್ಕೆ ತಿಳಿದಿದೆ. ಜಿಬ್ರಯೇಲ್ (ಸೂರ್ಯಗ್ರಹ) ಆಕಾಶದಿಂದ ತನಗೆ ಅವಕಾಶ ಬಂದಾಗಲೆಲ್ಲಾ ಇಳಿದುಬಂದು ಕೃತಯುಗದಲ್ಲಿ ಮನುವಿಗೆ ಹೇಳಿದ ಜ್ಞಾನವನ್ನೇ ಹೇಳುತ್ತಿದ್ದನು. ಮುಹಮ್ಮದ್ ಪ್ರವಕ್ತರವರಿಗೆ ಓದು ಬರುವುದಿಲ್ಲ ಆದ್ದರಿಂದ ದೈವಜ್ಞಾನವೆಲ್ಲವನ್ನು ಒಂದುಬಾರಿ ಹೇಳಲಿಲ್ಲ. ತಿಂಗಳಿಗೊಂದು ಸಲವೊ, ಎರಡು ತಿಂಗಳಿಗೊಂದುಸಲವೊ, ಮೂರು ತಿಂಗಳಿಗೊಂದುಸಲವೊ ಬಂದು ಒಂದು ಅಥವಾ ಎರಡು ವಾಕ್ಯಗಳನ್ನು ಹೇಳಿಹೋಗುತ್ತಿದ್ದನು. ಈ ವಿಧವಾಗ 23ವರ್ಷಗಳು ಜಿಬ್ರಯೇಲ್ ತನಗೆ ತಿಳಿದ ಜ್ಞಾನವನ್ನು ಹೇಳುತ್ತಿದ್ದನು. ಜಿಬ್ರಯೇಲ್ ಹೇಳಿದ ಜ್ಞಾನವನ್ನು ಕೇಳಿಸಿಕೊಂಡ ನಂತರ ಅದೇ ಜ್ಞಾನವನ್ನೇ ಅದೇ ದಿನ ಮನೆಹತ್ತಿರ ತನ್ನ ಸಹಚರರಿಗೆ ಪ್ರವಕ್ತರವರು ಹೇಳುತ್ತಿದ್ದರು. ಮನೆಹತ್ತಿರ ಕೇಳುವ ತನ್ನ ಸಹಚರರು ಕೂಡಾ ಓದುಬಾರದವರಾಗಿದ್ದರು. ಅವರಲ್ಲಿ ಒಬ್ಬರು ಓದು ಬಂದವನಿದ್ದರೂ ಆತನು ಪ್ರತಿದಿನ ಪ್ರವಕ್ತರ ಹತ್ತಿರ ಬೇಟಿಯಾಗದೆ ಇರುವುದರಿಂದ ಜಿಬ್ರಯೇಲ್ ಮೂಲಕ ಬಂದ ಜ್ಞಾನವನ್ನು ಬಂದಂತೆ ಕೇಳಲಿಲ್ಲ. ಒಂದು ವೇಳೆ ಸಮಯಕ್ಕೆ ಅಲ್ಲಿಯೇ ಇದ್ದು ಪ್ರವಕ್ತರವರು ತಂದ ಜ್ಞಾನವನ್ನು ಕೇಳಿಸಿಕೊಂಡರೆ ಅದನ್ನು ಕೂಡಲೇ ಬರೆದಿಡುತ್ತಿದ್ದನು. ಓದು ಬರುವವರು ಆಗಾಗ ಬರುವುದರಿಂದ ಅವರಿರುವಾಗ ಹೇಳಿದ ವಾಕ್ಯಗಳು ನೇರವಾಗಿ ಬರೆಯಲ್ಪಡುತ್ತಿದ್ದವು. ಈ ವಿಧವಾಗಿ ಪ್ರವಕ್ತರವರು ಹೇಳಿದಾಗಲೇ ಖುರ್‌ಆನ್ ಗ್ರಂಥ ಸ್ವಲ್ಪ ಬರೆಯಲ್ಪಟ್ಟಿದೆ. ಉಳಿದಿರುವುದೆಲ್ಲ ಕೇಳಿಸಿಕೊಂಡು ಜ್ಞಾಪಕ ಇಟ್ಟುಕೊಂಡಿರುವುದೇಯೆಂದು ಹೇಳುತ್ತಿದ್ದೇವೆ. **(ಗಮನಿಕೆ:– ಇಲ್ಲಿ ಖುರ್‌ಆನ್ ವಿಷಯ ನನಗೆ ನನ್ನಲ್ಲಿ ಉಂಟಾದ ಊಹೆ ಪ್ರಕಾರ ಬರೆಯುತ್ತಿದ್ದೇವೆ. ನನ್ನ ಮೇಲೆ ವಿಶ್ವಾಸ ಇರುವವರು ಇದನ್ನು ನಂಬಬಹುದು. ವಿಶ್ವಾಸ ಇಲ್ಲದವರು ನಂಬದೆ ಬಿಟ್ಟುಹಾಕಬಹುದು. ಅಷ್ಟೇ ಹೊರತು ನಾನು ಹೇಳುವುದೇ ನಂಬಿರೆಂದು ನಾನು ಹೇಳುತ್ತಿಲ್ಲ. ಹಾಗೆಂದು ನಾನು**

**ಹೇಳುವುದು ಸತ್ಯವೆಂದು ಹೇಳುವುದಿಲ್ಲ. ಹಾಗೇ ಅಸತ್ಯವೆಂದು ಕೂಡಾ ಹೇಳುವುದಿಲ್ಲ.)**

ಈ ವಿಧವಾಗಿ ಆಗಾಗ ಜಿಬ್ರಯೇಲ್ ಬಂದು ಪ್ರವಕ್ತರವರಿಗೆ ಹೇಳಿಹೋದಾಗ ಅದನ್ನೇ ತನ್ನ ಅನುಚರರಿಗೆ ಪ್ರವಕ್ತನು ಹೇಳುತ್ತಿದ್ದನು. ಜಿಬ್ರಯೇಲ್ ಹೇಳಿದ ಬೋಧನೆಯೇ ಖುರ್‌ಆನ್ ಜ್ಞಾನ. ಜಿಬ್ರಯೇಲ್ ಬರುವುದು ಯಾವಾಗೆಂದು ಯಾರಿಗೂ ಗೊತ್ತಿಲ್ಲ. ಆತನು ಹತ್ತುದಿನಗಳಿಂದ ನೂರು ದಿನಗಳೊಳಗೆ ಯಾವಾಗಾದರೂ ಬಂದು ಹೋಗುತ್ತಿದ್ದನು. ನೂರು ದಿನಗಳಿಗೆ ಮೀರಿ ಯಾವಾಗಲೂ ತಡ ಮಾಡಲಿಲ್ಲ. ಮುಹಮ್ಮದ್ ಪ್ರವಕ್ತರವರು ಮರಣಿಸಿದ ದಿನಕ್ಕೆ 82 ದಿನಗಳ ಮೊದಲೆ ಜಿಬ್ರಯೇಲ್ ಬಂದುಹೋಗಿದ್ದಾನೆಂದು ಪ್ರವಕ್ತರವರ ಜೀವನ ಚರಿತ್ರೆಯಲ್ಲಿ ಬರೆದಿದೆ. ಪ್ರವಕ್ತರವರು ಆರೋಗ್ಯವಾಗಿ ಇರುತ್ತಿದ್ದರು. ಒಂದುದಿನ ಸ್ಮಶಾನದಲ್ಲಿ ಸಮಾಧಿಗಳಲ್ಲಿ ಇರುವವರಿಗೆ ಒಳ್ಳೆಯದು ಕೈಗೂಡಬೇಕೆಂದು ಪ್ರವಕ್ತರವರು ಅಲ್ಲಿಗೆಹೋಗಿ ರಾತ್ರಿ ಎರಡರಿಂದ ಮೂರು ಗಂಟೆಗಳ ಮಧ್ಯೆ ನಮಾಜ್ ಮಾಡುವುದು ನಡೆದಿದೆ. ಆ ದಿನ ಸ್ಮಶಾನದಿಂದ ಮನೆಗೆ ಬರುವ ಸಮಯದಲ್ಲಿ ಬಂದ ಹೊಟ್ಟೆನೋವು ಸುಮಾರು ಹನ್ನೊಂದು ದಿನಗಳು ಆತನನ್ನು ಬಾಧಿಸುವುದು, ಆ ಬಾಧೆಯಿಂದಲೇ ಆತನು ಮರಣಿಸುವುದು ನಡೆದಿದೆ. ಅದು ಯಾರೂ ಊಹಿಸದ ಘಟನೆ. ಆತನು ಇನ್ನೂ ಕೆಲವು ವರ್ಷಗಳು ಬದುಕಿದ್ದರೆ ಕನಿಷ್ಟ ಇನ್ನೂ ಮೂರು ವರ್ಷಗಳಾದರೂ ಜ್ಞಾನ ಲಭಿಸಿರುತ್ತಿತ್ತು. ಪ್ರವಕ್ತರವರು ಮರಣಿಸಿದ ವಿಷಯ ಜಿಬ್ರಯೇಲ್ ಭೂಮಿಮೇಲಕ್ಕೆ ಬಂದ ನಂತರ ಆತನಿಗೆ ತಿಳಿದಿದೆ. ಪ್ರವಕ್ತರವರು ಕೂಡಾ ಆರೋಗ್ಯವಾಗಿ ಇರುವುದರಿಂದ ಅಷ್ಟು ಬೇಗನೆ ಮರಣಿಸುತ್ತಾನೆಂದು ಆತನು ಕೂಡಾ ಊಹಿಸಿರುವುದಿಲ್ಲ. ಪ್ರವಕ್ತರವರು ಮರಣಿಸುವುದರಿಂದ ಬರುವ ಜ್ಞಾನ ಮಧ್ಯದಲ್ಲಿ ನಿಂತುಹೋದಂತಾಗಿದೆ. ಮಧ್ಯದಲ್ಲಿ ಯಾವಕಡೆ ಅಲ್ಲದೆ ನಿಂತುಹೋದ ಜ್ಞಾನ ನನ್ನ ಊಹೆ ಪ್ರಕಾರ 25 ವರ್ಷಗಳಾದರೂ ಹೇಳಲ್ಪಡುತ್ತಿತ್ತು.

ಅದೇ ವಿಷಯವನ್ನೇ ನಾನು **"ಅಂತಿಮ ದೈವ ಗ್ರಂಥದಲ್ಲಿ ಜ್ಞಾನ ವಾಕ್ಯಗಳು"** ಎನ್ನುವ ಗ್ರಂಥದಲ್ಲಿ ಬರೆಯುವುದು ನಡೆದಿದೆ. ಅದನ್ನು ನೋಡಿದ ಕೆಲವರು ತಾವು ಹಿರಿಯರು ಅನಿಸಿಕೊಳ್ಳುವುದಕ್ಕೆ ಸ್ವಲ್ಪವಾದರೂ ಮಾತನಾಡಬೇಕೆನ್ನುವ ಉದ್ದೇಶದಿಂದ ನಾವು ಹೇಳುವುದು ತಪ್ಪೆಂದು ಖುರ್‌ಆನ್ ಗ್ರಂಥ ಪ್ರವಕ್ತರವರು ಬದುಕಿರುವಾಗಲೇ ಸಂಪೂರ್ಣ ಮಾಡಲ್ಪಟ್ಟಿದೆಯೆಂದು ಪ್ರವಕ್ತರವರೇ ಸ್ವತಃವಾಗಿ ಹೇಳಿದ್ದಾರೆಂದು ಅನ್ನುತ್ತಿದ್ದಾರೆ. ಅವರು ಹೇಳುವುದು ಆಧಾರವಿಲ್ಲದ ಮಾತಾದರೂ ಅವರದೇ ಸತ್ಯ ಎನ್ನುವಂತೆ ಹೇಳುತ್ತಿದ್ದಾರೆ. ನಾನು ಹೇಳಿರುವುದರಲ್ಲಿ ಪ್ರವಕ್ತರವರು ಬದುಕಿದ್ದರೆ ಇನ್ನೂ ಸ್ವಲ್ಪ ಜ್ಞಾನ ಬರುತ್ತಿತ್ತೇನೊ ಎನ್ನುವ ಆಸೆಯಿಂದ ಹೇಳಿದ್ದೇವೆ ಹೊರತು ಅದರಲ್ಲಿ ಬರುವ ನಷ್ಟವಾಗಲಿ, ಲಾಭವಾಗಲಿ ಏನೂಇಲ್ಲ. ಅವರು ಹೇಳಿದಂತೆ ಖುರ್‌ಆನ್ ಪ್ರವಕ್ತರವರು ಬದುಕಿರುವಾಗಲೇ ಮುಗಿದುಹೋಗಿದ್ದರೆ ಆ ವಿಷಯವನ್ನು ಖುರ್‌ಆನ್ ಗ್ರಂಥದಲ್ಲಿ ಬರೆದಿರುತ್ತಿದ್ದರು. ಗ್ರಂಥದಲ್ಲಿ 114 ಸೂರಾಗಳು 6236 ಆಯತ್‌ಗಳು ಇವೆ. ಅದರಲ್ಲಿ 114ನೇ ಕೊನೆಯ ಸೂರಾದಲ್ಲಿ ಆ ವಿಷಯವನ್ನು ಬರೆದಿರುತ್ತಿದ್ದರು. ಇಲ್ಲದಿದ್ದರೆ ಯಾವುದೋ ಒಂದು ಸೂರಾ ಕೊನೆಯಲ್ಲಿ ಆದರೂ ಬರೆದಿರುತ್ತಿದ್ದರು. ಹಾಗೆ ಎಲ್ಲಿಯಾಗಲಿ ಬರೆಯದೇ ಮುಗಿದುಹೋಗಿದೆಯೆಂದು ಕೆಲವರನ್ನುವುದು ಆಶ್ಚರ್ಯ.

ಪ್ರವಕ್ತರವರು ಎಲ್ಲಿಯಾಗಲಿ ಖುರ್‌ಆನ್ ಗ್ರಂಥ ಮುಗಿದು ಹೋಗಿದೆಯೆಂದು ಹೇಳಲಿಲ್ಲ ಅಲ್ಲವೆ! ಹಾಗಿರುವಾಗ ನೀವು ಹೇಗೆ ಆ ಮಾತನ್ನು ಹೇಳುತ್ತಿದ್ದೀರೆಂದು ಕೇಳಿದಾಗ! ಅದಕ್ಕೆ ಸಮಾಧಾನವಾಗಿ ಐದನೆ ಸೂರಾದಲ್ಲಿ, ಮೂರನೆ ಆಯತ್‌ನಲ್ಲಿ ಖುರಾನ್ ಗ್ರಂಥ ಎಲ್ಲವೂ ಹೇಳಿದ್ದೇನೆಂದು, ಇಲ್ಲಿಗೆ ಮುಗಿದುಹೋಗಿದೆಯೆಂದು ಹೇಳಿದಂತಿದೆಯೆಂದು ಹೇಳಿದ್ದಾರೆ. ಅವರು 5–3ರಲ್ಲಿ ಇದೆಯೆಂದು ಹೇಳುವುದರಲ್ಲಿ ಏನೊ ಅವರಿಗೆ ತಿಳಿಯದತನವಿದೆಯೆಂದು, ಅವರು ವಿಚಕ್ಷಣೆ ಇಲ್ಲದೇ ಮಾತನಾಡುತ್ತಿದ್ದಾರೆಂದು ಅರ್ಥವಾಗಿದೆ. ಆಗ ಪುನಃ ನಾನು ಪ್ರಶ್ನಿಸುವುದು ನಡೆದಿದೆ. ಖುರ್‌ಆನ್ ಗ್ರಂಥ ಪೂರ್ತಿ

ಮುಗಿದುಹೋಗಿದ್ದರೆ ಗ್ರಂಥದ ಕೊನೆಯಲ್ಲಿ ಇಲ್ಲಿಗೆ ಗ್ರಂಥ ಮುಗಿದುಹೋಗಿದೆ ಯೆಂದು ಬರೆಯುವುದು ಸಹಜವಾಗಿ ನಡೆಯುತ್ತದೆ. ಅಂತಾದ್ದು ಯಾವ ಕಡೆಯೂ ಅಲ್ಲದೆ ಮಧ್ಯದಲ್ಲಿ ಐದನೆ ಸೂರಾದಲ್ಲಿ ಮೂರನೆ ಆಯತ್‌ನಲ್ಲಿ ಮುಗಿದುಹೋಗಿದೆಯೆಂದು ಹೇಳುವುದು ನಡೆಯುವುದಿಲ್ಲ ಅಲ್ಲವೆ! ಎಂದು ಕೇಳಿದ್ದೇವೆ. ಅದಕ್ಕೆ ಅವರು ಅದು ಹೇಳುವವರ ಇಷ್ಟ ಎಲ್ಲಿಯಾದರೂ ಮುಗಿದುಹೋಗಿದೆಯೆಂದು ಹೇಳಬಹುದು ಎಂದು ಹೇಳಿದ್ದಾರೆ. ಆ ಮಾತಿನಿಂದ ಇವರ ತಲೆಯಲ್ಲಿ ಮೆದುಳು ಇದೆಯೊ ಇಲ್ಲವೊ ಎನಿಸಿದೆ. ಒಂದುವೇಳೆ ಮೆದುಳಿದ್ದರೂ ಅದರಲ್ಲಿ ಬುದ್ಧಿ ಇರುವುದಿಲ್ಲ ಎಂದುಕೊಂಡಿದ್ದೇನೆ. ಒಂದುವೇಳೆ ಬುದ್ಧಿ ಇದ್ದರೂ ಅದು ಬಹಳ ಮಂದವಾಗಿ ಇರುತ್ತದೆಂದು, ಒಂದುವೇಳೆ ಬುದ್ಧಿ ಮಂದವಾದರೂ ಅದಕ್ಕೆ ವಿಚಕ್ಷಣೆ ಎನ್ನುವುದು ಸ್ವಲ್ಪವೂ ಕೂಡಾ ಇಲ್ಲವೆಂದು ಅರ್ಥವಾಗಿದೆ. ಅವರು ಮಾತನಾಡುವುದು ಪೂರ್ತಿ ತಪ್ಪು. ಆದರೂ ತಮ್ಮದೇ ಸತ್ಯವೆಂದು, ಇತರರದ್ದು ಅಸತ್ಯವೆಂದು ಅವರು ಅಂದುಕೊಳ್ಳುವುದರಿಂದ, ಅವರಲ್ಲಿ ಸತ್ಯಯಾವುದು ಎನ್ನುವುದನ್ನು ಆಲೋಚಿಸುವ ಬುದ್ದಿ ವಿಚಕ್ಷಣೆ ಸ್ವಲ್ಪವೂ ಇಲ್ಲದಿರುವುದರಿಂದ ಅವರು ಸತ್ಯವನ್ನು ಗುರುತಿಸಲಿಲ್ಲ ವೆಂದು, ಅವರಿಗೆ ಏನು ತೋಚಿದರೆ ಅದೇ ನಿಜವೆಂದು ನಂಬುವಂತೆ ದೇವರೇ ತಯಾರು ಮಾಡಿದ್ದಾನೆಂದು, ಹಾಗೆ ತಯಾರು ಮಾಡಿ ಅವರನ್ನು ಅಪಮಾರ್ಗದಲ್ಲಿ ಕಳಿಸುತ್ತಾನೆ, ಅವರಿಗೆ ಎಂದಿಗೂ ಸರಿಯಾದ ಮಾರ್ಗ ದೊರೆಯದಂತೆ ಮಾಡುತ್ತೇನೆಂದು ಪ್ರಥಮ ಮತ್ತು ಅಂತಿಮ ದೈವ ಗ್ರಂಥಗಳಲ್ಲಿ ಹೇಳಿದಂತೆ ಪ್ರತ್ಯಕ್ಷವಾಗಿ ನನಗೆ ಕಾಣಿಸಿದೆ ಯೆಂದು ಅಂದು ಕೊಂಡಿದ್ದೇನೆ.

ಅವರು ಮಂದಬುದ್ಧಿ ಇರುವವರೆನ್ನುವುದಕ್ಕೆ ನಿದರ್ಶನ ಖುರ್‌ಆನ್ ಗ್ರಂಥ ಸಂಪೂರ್ಣವಾಗಿದೆಯೆಂದು ಮುಹಮ್ಮದ್ ಪ್ರವಕ್ತ ಆ ವಿಷಯ ಸೂರಾ 5, ಆಯತ್ 3ರಲ್ಲಿ ಹೇಳಿದ್ದಾನೆಂದು ಅನ್ನುವುದೇಯೆಂದು ಹೇಳಬಹುದು. ಅಷ್ಟೇಅಲ್ಲದೆ ಅವರು ಹೇಳಿದ (5–3) ರಲ್ಲಿ ಆಹಾರಕ್ಕೆ ಸಂಬಂಧಿಸಿದ ವಿಷಯ ಇದೆ. ಆ ಆಯತ್‌ನಲ್ಲಿ ಮನುಷ್ಯ ತಿನ್ನುವ ಆಹಾರ ಒಂದರ ನಿಯಮಗಳನ್ನು

ಅಲ್ಲಾಹ್ ಹೇಳಿದಂತೆ ಇದೆ. ಇಂತಹ ಆಹಾರ ಮನುಷ್ಯ ತಿನ್ನಬಹುದು, ಇಂತಹ ಆಹಾರ ತಿನ್ನಬಾರದೆಂದು, ಆಹಾರ ನಿಯಮಗಳನ್ನು ಧರ್ಮಸಮ್ಮತ ಮಾಡಿ ಹೇಳಿದಂತೆ ಇದೆ. ಅಲ್ಲಾಹ್ ಕೆಲವು ಅನಾರೋಗ್ಯವನ್ನು ಉಂಟುಮಾಡುವ ಆಹಾರಗಳನ್ನು ಹೇಳಿ ಅವುಗಳನ್ನು ತಿನ್ನಬಾರದೆಂದು, ಒಂದುವೇಳೆ ಅವುಗಳನ್ನು ತಿಂದರೆ ಧರ್ಮವಿರುದ್ಧವಾದ ಪಾಪ ಬರುತ್ತದೆಂದು ಹೇಳಿದ್ದಾನೆ. ಆ ಮಾತು ಹೇಳಿದ ನಂತರ ಒಂದುವೇಳೆ ಎಲ್ಲಿಯೂ ಆಹಾರ ಸಿಗದಿರುವಾಗ ಹಸಿವು ನೀಗಿಸಲು ಯಾವ ದಾರಿ ಇಲ್ಲದಿರುವಾಗ ನಿಷೇಧಿತ ಆಹಾರವನ್ನು ತಿಂದರೂ ಫರವಾಗಿಲ್ಲ ದೇವರು ಕ್ಷಮಿಸುತ್ತಾನೆಂದು ಹೇಳಿದ್ದಾರೆ. ಈಗ 5–3 ವಾಕ್ಯಗಳಲ್ಲಿ ಏನು ಬರೆದಿದ್ದಾರೊ ಅಂತಿಮ ದೈವಗ್ರಂಥದಲ್ಲಿನ ಆ ವಾಕ್ಯವನ್ನು ಈಗ ಇಲ್ಲಿ ಹೇಳಿಕೊಳ್ಳೋಣ.

**(5–3) “ತಮ್ಮಷ್ಟಕ್ಕೆ ತಾವು ಮರಣಿಸಿದ ಪಶುಗಳು, ಪಕ್ಷಿಗಳು, ರಕ್ತ, ಹಂದಿಮಾಂಸ, ದೇವತೆಗಳ ಹೆಸರಿನಿಂದ ಬಲಿಕೊಟ್ಟ ಪಶು ಪಕ್ಷಿಗಳು, ಊಸಿರಾಡದೆ ಅಥವಾ ಹೊಡೆತಗಳಿಂದ, ಇಲ್ಲವೇ ಎತ್ತರ ಪ್ರದೇಶದಿಂದ ಕೆಳಗೆ ಬಿದ್ದು ಮರಣಿಸಿದ ಪ್ರಾಣಿಗಳು ತಿನ್ನುವುದಕ್ಕೆ ನಿಮಗೆ ನಿಷೇಧಿಸಲ್ಪಟ್ಟಿವೆ. ಸಜೀವವಾಗಿ ಇರುವಾಗಲೇ ನೀವು ಅಲ್ಲಾಹ್ (ದೇವರ) ಹೆಸರಿನಿಂದ ಕೊಯ್ದಿರುವವು ಹೊರತುಪಡಿಸಿ ಇರಿಯುವುದರಿಂದ, ಕ್ರೂರ ಮೃಗದ ದಾಳಿಯಲ್ಲಿ ಮೃತಿಹೊಂದಿದ ಪಶುಗಳು ಕೂಡಾ ನಿಷೇಧಿಸಲ್ಪಟ್ಟಿವೆ. ಇನ್ನೂ ವಿಗ್ರಹಗಳ ಮುಂದೆ, ಇತರ ದೇವತೆಗಳ ಚಿಹ್ನೆಗಳ ಮುಂದೆ ಬಲಿ ಕೊಟ್ಟ ಪಶುಗಳು ಕೂಡಾ ನಿಷೇಧಿಸಲ್ಪಟ್ಟಿವೆ. ಪಗಡೆಗಳ ಮೂಲಕ ಜಾತಕ ತಿಳಿದುಕೊಳ್ಳುವುದು ಕೂಡಾ ನಿಷೇಧಿಸಲ್ಪಟ್ಟಿದೆ. ಇವೆಲ್ಲ ಪಾಪ ಕಾರ್ಯಗಳು, ಅವುಗಳನ್ನು ಬಿಟ್ಟುಹಾಕಿರಿ.”**

**ಸತ್ಯ ತಿರಸ್ಕಾರ, ಅವಿಶ್ವಾಸಿಗಳು ನಿಮ್ಮ ಧರ್ಮವನ್ನು ಕುರಿತು ಈಗ ಪೂರ್ತಿಯಾಗಿ ಆಸೆಗಳನ್ನು ಬಿಟ್ಟಿದ್ದಾರೆ. ಆದ್ದರಿಂದ ನೀವು ಅವರಿಗೆ ಸ್ವಲ್ಪವೂ ಭಯಪಡದೆ, ನನಗೇ ಭಯಪಡಬೇಕು. ನಾನು ಈದಿನ ನಿಮಗಾಗಿ ನಿಮ್ಮ ಧರ್ಮವನ್ನು (ಸಮಗ್ರ ಜೀವನ ವ್ಯವಸ್ಥೆಯಾಗಿ) ಪರಿಪೂರ್ಣ ಮಾಡಿದ್ದೇನೆ.**

**ನಿಮಗೋಸ್ಕರ ನನ್ನ ಅನುಗ್ರಹವನ್ನು ಪೂರ್ತಿಯಾಗಿ ನೆರವೇರಿಸಿದ್ದೇನೆ. ನಿಮ್ಮ ಶ್ರೇಯಸ್ಸಿಗಾಗಿ ಇಸ್ಲಾಮ್‌ನನ್ನು ನಿಮ್ಮ ಜೀವನ ಧರ್ಮವಾಗಿ ಆಮೋದಿಸಿದ್ದೇನೆ. (ಆದ್ದರಿಂದ ಈಗಿನಿಂದ ನಿಷೇಧಿತಗಳ ಸಹವಾಸಕ್ಕೆ ಹೋಗಬೇಡಿ.) ಆದರೇ ತೀವ್ರವಾದ ಹಸಿವಿನಿಂದ ಇದ್ದು ಮತ್ತೊಂದು ಆಹಾರ ಇಲ್ಲದಿರುವಾಗ ನಿಷೇಧಿತ ಆಹಾರದಲ್ಲಿ ಯಾವುದಾದರೂ ತಿನ್ನಬಹುದು. ಹಾಗೆ ತಿಂದರೂ ಫರವಾಗಿಲ್ಲ, ದೇವರು ಕ್ಷಮಿಸುತ್ತಾನೆ. ದೇವರು ಕ್ಷಮಿಸುವವನು, ಕರುಣಿಸುವವನು.**

**(ಈ ವಿವರ "ಖುರ್‌ಆನ್ ಭಾವಾಮೃತ" ಎನ್ನುವ ಗ್ರಂಥದಿಂದ ಶೇಕರಿಸಿ ಬರೆಯಲ್ಪಟ್ಟಿದೆ.)**

ಖುರ್‌ಆನ್ ಗ್ರಂಥ ಈದಿನ ಸುಮಾರು ಏಳು ಅಥವಾ ಎಂಟು ತೆಲುಗು ಅನುವಾದ ಗ್ರಂಥಗಳಾಗಿ ತಯಾರಾಗಿದೆ. ನಾನು ಒಬ್ಬ ಹಿಂದೂವಾಗಿದ್ದು ಖುರ್‌ಆನ್ ಗ್ರಂಥದಲ್ಲಿನ ಕೆಲವು ಆಯತ್‌ಗಳಿಗೆ ವಿವರಗಳು ಸರಿಯಾಗಿ ಇಲ್ಲದಿರುವುದರಿಂದ ಇನ್ನೂರು ವಾಕ್ಯಗಳಿಗೆ ವಿವರವನ್ನು ಬರೆದು **"ಅಂತಿಮ ದೈವ ಗ್ರಂಥದಲ್ಲಿ ಜ್ಞಾನ ವಾಕ್ಯಗಳು"** ಎನ್ನುವ ಹೆಸರು ಇಡುವುದಾಗಿದೆ. ಆ ಗ್ರಂಥವನ್ನು ಓದಿದ ಹಿಂದೂಗಳು, ಮುಸ್ಲಿಮ್‌ರು ಬಹಳ ಸಂತೋಷವನ್ನು ವ್ಯಕ್ತಪಡಿಸಿದ್ದಾರೆ. ಯಾವ ಮತದಲ್ಲಾದರೂ ದೇವರು ಹೇಳಿದ ವಾಕ್ಯಗಳನ್ನು ತಪ್ಪಾಗಿ ಅರ್ಥ ಮಾಡಿಕೊಂಡಾಗ, ಅಲ್ಲಿ ಅವರ ಭಾವನೆ ಒಳ್ಳೆಯದು ಅಲ್ಲವೆಂದು ತಿಳಿಸುತ್ತಾ ಅದಕ್ಕೆ ಸರಿಯಾದ ವಿವರವನ್ನು ತಿಳಿಸುತ್ತಿದ್ದೇವೆ. ಈ ವಿಧವಾಗಿ ಮೂರು ಮತಗಳು ನನಗೆ ಸಮಾನವೇ. ಮೂರು ಮತ ಗ್ರಂಥಗಳ ಬಗ್ಗೆ ಸಮಾನ ಗೌರವ ಭಾವನೆಯಿದೆ. ದೇವರು ಒಬ್ಬನೇ ಆದಾಗ ದೈವ ಗ್ರಂಥಗಳು ಮೂರು ಆದರೂ ಮೂರರ ಜ್ಞಾನ ಒಂದೇ. ಮೂರರ ಜ್ಞಾನದಲ್ಲಿ ದೇವರು ಒಬ್ಬನೇ. ಆದ್ದರಿಂದ ಮೂರು ಗ್ರಂಥಗಳಲ್ಲಿ ನನ್ನ ಜೋಕ್ಯ ಇರುತ್ತದೆ.

ಈಗ (5–3) ವಾಕ್ಯದಲ್ಲಿ ಖುರ್‌ಆನ್ ಜ್ಞಾನ ಎಲ್ಲವೂ ಮುಗಿದುಹೋಗಿದೆ ಸಂಪೂರ್ಣವಾಗಿ ಹೇಳಿದ್ದೇನೆಂದು ಪ್ರವಕ್ತರವರು ಹೇಳಿದ್ದಾರೆಂದು ನಾವು ಇಸ್ಲಾಮ್ ಹಿರಿಯರೆನ್ನುವವರು ಹೇಳುತ್ತಿದ್ದಾರೆ. ಅವರು ಅಷ್ಟೇಅಲ್ಲದೆ ನಾವೇ

ನಿಜವಾದ ಮುಸ್ಲಿಮ್‌ರು, ಉಳಿದವರೆಲ್ಲರೂ ಸರಿಯಾದ ಮುಸ್ಲಿಮ್‌ರು ಅಲ್ಲವೆಂದು, ಅವರೆಲ್ಲರೂ ಕಾಫೀರರೆಂದು (ಅವಿಶ್ವಾಸಿಗಳೆಂದು) ಹೇಳುತ್ತಿದ್ದಾರೆ. ಅವರವರು ಏನೆಂದುಕೊಂಡರೂ ಫರವಾಗಿಲ್ಲ ಆದರೆ, ದೇವರ ವಾಕ್ಯವನ್ನು ತಪ್ಪಾಗಿ ವಿವರಿಸುವುದು ಒಳ್ಳೆಯದು ಅಲ್ಲವಲ್ಲ! ದೇವರ ಮಾರ್ಗವನ್ನು ತಪ್ಪಾಗಿ ತೋರಿಸಿದಂತಾಗುತ್ತದೆ. (5–3) ವಾಕ್ಯದಲ್ಲಿ ಇರುವುದು ಒಂದು ವಿಷಯವಾದಾಗ ಅವರು ಹೇಳುವುದು ಮತ್ತೊಂದು ವಿಷಯವಾಗಿದೆ. ಆ ವಾಕ್ಯದಲ್ಲಿ ಹೇಳಿರುವುದು ಮನುಷ್ಯರ ಆಹಾರವನ್ನು ಕುರಿತು ಮುಖ್ಯವಾಗಿ ಇದೆ. ವಾಕ್ಯವೆಲ್ಲಾ ಶೇ.95 ರಷ್ಟು ಆಹಾರವನ್ನು ಕುರಿತು ಹೇಳಿ ಒಂದೇವೊಂದು ವಾಕ್ಯ ಅದೃಷ್ಟವನ್ನು ಪರೀಕ್ಷಿಸಿಕೊಳ್ಳುವ ಕೆಲಸ ಯಾವುದಾದರೂ ಅಧರ್ಮವೇಯೆಂದು ಹೇಳಿದ್ದಾನೆ. ತಿಂಡಿಯನ್ನು ಕುರಿತು ಶೇ.95 ರಷ್ಟು, ಜೂಜನ್ನು ಕುರಿತು ಶೇ.ಐದ (5) ರಷ್ಟು ಹೇಳಿ ನಿಮಗೆ ಸಂಬಂಧಿಸಿದ ಧರ್ಮವನ್ನು ಸಂಪೂರ್ಣವಾಗಿ ಹೇಳಿದ್ದೇನೆ ಎಂದಿದ್ದಾನೆ. ನಿಮ್ಮ ಧರ್ಮವನ್ನು ಎಂದರೇ ಮನುಷ್ಯನ ಜೀವನದಲ್ಲಿ ತಿಂಡಿ ಮತ್ತು ಅದೃಷ್ಟವನ್ನು ಪರೀಕ್ಷಿಸಿಕೊಳ್ಳುವುದು ಈ ಎರಡು ವಿಷಯಗಳನ್ನು ಕುರಿತು ಸಂಪೂರ್ಣವಾಗಿ ತಿಳಿಸಿದ್ದೇನೆಂದು ಹೇಳಿದ್ದಾನೆ. ಅಷ್ಟೇ ಅಲ್ಲದೆ ಅವಿಶ್ವಾಸಿಗಳು ನನ್ನ ಮಾತನ್ನು ಕೇಳುವುದಿಲ್ಲ ಅವರಿಗೆ ನೀವು ಭಯಪಡಬೇಡಿ. ನನಗೇ ಭಯಪಟ್ಟು ನಾನು ಹೇಳಿದಂತೆ ಕೇಳಿರಿಯೆಂದು ಕೂಡಾ ಹೇಳಿದ್ದಾನೆ. ಕೊನೆಯದಾಗಿ ಮತ್ತೊಂದು ಮಾತು ಕೂಡಾ ಹೇಳಿದ್ದಾನೆ. ಆಹಾರ ನಿಮಯವನ್ನು ಕುರಿತು ಹೆಚ್ಚಾಗಿ ಶೇ.95 ರಷ್ಟು ಹೇಳಿರುವುದರಿಂದ ತನ್ನ ಪ್ರಜೆಗಳ ಮೇಲೆ ಪ್ರೀತಿಯಿಂದ, ಎಲ್ಲಿಯಾದರೂ ಪೂರ್ತಿ ಹಸಿವುಗೊಂಡಾಗ, ತಿನ್ನುವುದಕ್ಕೆ ಏನು ಸಿಗದಿರುವಾಗ, ನಿಷೇಧಿತ ಆಹಾರವನ್ನು ಯಾವುದನ್ನು ತಿಂದರೂ ಫರವಾಗಿಲ್ಲ. ಅದು ಉದ್ದೇಶಪೂರ್ವಕವಾಗಿ ಮಾಡಿರುವುದು ಅಲ್ಲ ವಿಧಿಯಿಲ್ಲದೆ (ಮಾರ್ಗವಿಲ್ಲದೆ) ತಿಂದಿರುವುದರಿಂದ ದೇವರು ಕ್ಷಮಿಸುತ್ತಾನೆಂದು ಹೇಳಿದೆ. ಬುದ್ಧಿಯಿಂದ ಗಮನವಿಟ್ಟು ಓದುವವರಿಗೆ ಯಾರಿಗಾದರೂ ಮುಖ್ಯವಾಗಿ ಆಹಾರವೊಂದರ ಧರ್ಮವೇ ಇದರಲ್ಲಿ ಹೇಳಿರುವಂತೆ ಇದೆ. 'ಆಹಾರ ಧರ್ಮವನ್ನು ಸಂಪೂರ್ಣವಾಗಿ ಹೇಳಿದ್ದೇನೆ' ಎಂದು ಹೇಳಿದ್ದಾನೆ ಆದರೆ,

ಖುರ್‌ಆನ್ ಜ್ಞಾನ ಸಂಪೂರ್ಣವಾಗಿ ಹೇಳಿದ್ದೇನೆ, ಇದರ ನಂತರ ಏನು ಇಲ್ಲವೆಂದು ಹೇಳಲಿಲ್ಲ. ಒಂದುವೇಳೆ ಖುರ್‌ಆನ್ ಧರ್ಮ ಸಂಪೂರ್ಣ ಆಗಿದ್ದರೆ ಖುರ್‌ಆನ್ ಕೊನೆಯಲ್ಲಿ ಹೇಳಿರುತ್ತಿದ್ದರು. ಹಾಗೆ ಖುರ್‌ಆನ್ ಗ್ರಂಥದಲ್ಲಿ ಗ್ರಂಥ ಅಂತ್ಯವಾಗಿದೆ ಎಂದು ಎಲ್ಲಿಯೂ ಹೇಳಲಿಲ್ಲ. ಮುಹಮ್ಮದ್ ಪ್ರವಕ್ತರು ಇರುವವರೆಗು ಖುರ್‌ಆನ್ ಗ್ರಂಥ ಪೂರ್ತಿ ಆಗಲಿಲ್ಲ. ಪ್ರವಕ್ತರಿಗೆ ಜ್ಞಾನವನ್ನು ತಿಳಿಸುವ ಜಿಬ್ರಯೇಲ್ ಆಗಲಿ, ಜ್ಞಾನವನ್ನು ತಿಳಿದುಕೊಳ್ಳುವ ಪ್ರವಕ್ತನಾಗಲಿ ಎಲ್ಲಿಯೂ ತಮ್ಮ ಬೋಧನೆಗಳು ಪೂರ್ತಿಯಾಗಿ ಮುಗಿದುಹೋಗಿವೆಯೆಂದು ಹೇಳಲಿಲ್ಲ.

ಒಂದುವೇಳೆ ಜಿಬ್ರಯೇಲ್ ಹೇಳುವ ಬೋಧನೆಗಳು ಸಂಪೂರ್ಣ ವಾಗಿದ್ದರೆ ಆ ವಿಷಯವನ್ನು ಗ್ರಂಥದ ಕೊನೆಯಲ್ಲಿ ತಪ್ಪದೆ ಹೇಳಿರುತ್ತಿದ್ದರು. ಖುರ್‌ಆನ್ ಗ್ರಂಥ 114 ಸೂರಾಗಳೊಂದಿಗೆ ಇದ್ದರೂ ಜ್ಞಾನ ಮುಗಿದುಹೋದಂತೆ ಎಲ್ಲಿಯೂ ಹೇಳಲಿಲ್ಲ. ಹೇಳಿದರೆ ಗ್ರಂಥದ ಕೊನೆಯಲ್ಲಿಯೇ ಹೇಳಬೇಕು. ಹಾಗೆ ಎಲ್ಲಿಯೂ ಬರೆಯಲಿಲ್ಲ. ಎರಡರಿಂದ ಮೂರು ಗಂಟೆಗಳ ವರೆಗು ಆಡುವ ಸಿನಿಮಾಗೆ 'ಶುಭಂ' ಎನ್ನುವ ಮುಕ್ತಾಯದ ಕೊನೆಯಲ್ಲಿ ಇರುತ್ತದೆ. ಸಿನಿಮಾ ಮಧ್ಯದಲ್ಲಿ ಮುಕ್ತಾಯ ಇದೆಯೆಂದರೂ ಶುಭಂ ಎಂದು ತೋರಿಸಿದರೂ ಅದರ ನಂತರ ಸಿನಿಮಾ ಹಾಕಬಾರದು. ಮುಕ್ತಾಯದ ನಂತರ ಸಿನಿಮಾ ಹೇಗೆ ಇರುವುದಿಲ್ಲವೊ ಹಾಗೆಯೇ ಐದನೆ ಸೂರಾದಲ್ಲಿ ಮೂರನೆ ವಾಕ್ಯದ ಹತ್ತಿರವೇ ಮುಕ್ತಾಯವಿದ್ದರೆ ಗ್ರಂಥ ಅಲ್ಲಿಯೇ ನಿಂತುಹೋಗಬೇ ಕಾಗಿರುತ್ತದೆ. ಹಾಗಲ್ಲದೆ ಗ್ರಂಥ ಐದನೆ ಸೂರಾದೊಂದಿಗೆ ನಿಲ್ಲದೆ 114 ಸೂರಾಗಳವರೆಗು ಸಾಗಿದೆಯೆಂದರೆ ಗ್ರಂಥ ಅಲ್ಲಿಗೆ ಮುಗಿದುಹೋಗಲಿಲ್ಲವೆಂದು ಅರ್ಥ. ಒಂದು ಅಂತಿಮ ದೈವಗ್ರಂಥ ಖುರ್‌ಆನ್ ಒಂದೇ ಅಲ್ಲ, ದ್ವಿತೀಯ ದೈವಗ್ರಂಥಕ್ಕೆ ಕೂಡಾ ಮುಕ್ತಾಯವಿಲ್ಲ. ಸುವಾರ್ತೆಗಳ ಜ್ಞಾನ ಹೇಳಿದ ಯೇಸು ಕೂಡಾ ಇಲ್ಲಿಗೆ ಜ್ಞಾನ ಸಂಪೂರ್ಣವಾಗಿದೆಯೆಂದು ಹೇಳಲಿಲ್ಲ. ನನ್ನ ನಂತರ ಬರುವ ಆದರಣಕರ್ತ ನಿಮಗೆ ನಾನು ಹೇಳದೆ ಬಿಟ್ಟಿರುವ ವಿಷಯಗಳು ಕೂಡಾ

ಹೇಳುತ್ತಾನೆಂದೇ ಹೇಳಿದ್ದಾನೆ. ಇದರ ಪ್ರಕಾರ ಬೈಬಲ್ ಎಂದು ಹೇಳಲ್ಪಡುವ ದ್ವಿತೀಯ ದೈವ ಗ್ರಂಥಕ್ಕು ಕೂಡಾ ಮುಕ್ತಾಯವಿಲ್ಲ.

ಯಾವ ವಿಷಯಕ್ಕಾದರೂ, ಹಾಗೇ ಯಾವ ಕಥೆಗಾದರೂ ಒಂದು ಮುಕ್ತಾಯ ಇರುತ್ತದೆ. ಭಜನೆ ಮುಕ್ತಾಯದಲ್ಲಿ 'ಗೋವಿಂದ' ಎನ್ನುತ್ತಿದ್ದೇವೆ. ಪೂಜೆ ಮುಕ್ತಾಯದಲ್ಲಿ ಮಂಗಳ ಹಾರತಿಯೊಂದಿಗೆ ಮಂಗಳ ಹೇಳುತ್ತಿದ್ದೇವೆ. ಬೋಧನೆಗಳ ಕೊನೆಯಲ್ಲಿ 'ಓಂ ತತ್ಸತ್' ಎನ್ನುತ್ತಿದ್ದೇವೆ. ಈ ವಿಧವಾಗಿ ಪ್ರತಿಯೊಂದಕ್ಕು ಮುಕ್ತಾಯವಿದೆ, ಆದರೆ ಜ್ಞಾನಕ್ಕೆ ಮುಕ್ತಾಯವಿಲ್ಲ. ಆದ್ದರಿಂದ ದೈವಜ್ಞಾನವನ್ನು ಸಮುದ್ರದೊಂದಿಗೆ ಹೋಲಿಸುತ್ತಿದ್ದಾರೆ. ಸಮುದ್ರಕ್ಕೆ ಹೇಗೆ ಮುಕ್ತಾಯವಿಲ್ಲವೊ ಹಾಗೆಯೇ ಜ್ಞಾನಕ್ಕೆ ಮುಕ್ತಾಯವಿಲ್ಲ. ಆದ್ದರಿಂದ ಇಲ್ಲಿಗೆ ಜ್ಞಾನ ಸಮಾಪ್ತಿ ಎಂದು ಹದ್ದನ್ನು ಏರ್ಪಡಿಸಿ ಹೇಳಲಿಲ್ಲ. ದೇವರಿಗೆ ಎಲ್ಲೆಯಿಲ್ಲ. ಆದುದರಿಂದ ದೇವರ ಜ್ಞಾನಕ್ಕೆ ಕೂಡಾ ಎಲ್ಲೆ ಇಲ್ಲವೆಂದು ಹೇಳಬಹುದು. ಒಂದುವೇಳೆ ಜ್ಞಾನಕ್ಕೆ ಎಲ್ಲೆ ಇದ್ದರೆ ಎಲ್ಲೆವರೆಗು ನಾನು ಜ್ಞಾನ ತಿಳಿದುಕೊಂಡಿದ್ದೇನೆ. ಇನ್ನು ಏನು ಉಳಿದಿಲ್ಲವೆಂದು ಮನುಷ್ಯ ಹೇಳುವನು. ಅಂತಹ ಅವಕಾಶವನ್ನು ದೇವರು ಮನುಷ್ಯನಿಗೆ ಕೊಡಲಿಲ್ಲ. ದೇವರು ಎಲ್ಲೆಗಳಿಲ್ಲದವನೆ ಆದ್ದರಿಂದ ದೇವರ ಜ್ಞಾನಕ್ಕೆ ಕೂಡಾ ಎಲ್ಲೆ ಇಲ್ಲವೆಂದು ಹೇಳಬಹುದು. ದೇವರು ಹೇಳಿದ ಕೆಲವು ಮಾತುಗಳನ್ನೇ ಮನುಷ್ಯ ಸರಿಯಾಗಿ ಗ್ರಹಿಸಿಕೊಳ್ಳದಿದ್ದಾನೆ. ಪೂರ್ತಿ ಜ್ಞಾನವನ್ನು ತಿಳಿಯುವುದಕ್ಕೆ ಸಾಧ್ಯವಾಗುತ್ತದಾ! ಸಾಧ್ಯ ಆಗುವುದಿಲ್ಲವೆಂದೇ ಹೇಳಬಹುದು.

ದೈವ ಗ್ರಂಥದಲ್ಲಿನ ವಾಕ್ಯಗಳೆಲ್ಲವೂ ಮನುಷ್ಯ ಜ್ಞಾನ ತಿಳಿದುಕೊಳ್ಳುವುದಕ್ಕೇ ದೇವರು ಹೇಳಿದ್ದರೂ, ಮನುಷ್ಯ ಮಾತ್ರ ತನ್ನ ಬುದ್ಧಿಯನ್ನು ವಾಕ್ಯಗಳ ಮೇಲಿಟ್ಟು ನೋಡದಂತೆ ಸ್ವಲ್ಪವೂ ವಿಚಕ್ಷಣೆ ಇಲ್ಲದವನಾಗಿ, ಸತ್ಯವನ್ನು ತಿಳಿಯಬೇಕೆನ್ನುವ ಧ್ಯಾಸವಿಲ್ಲದೆ, ತನಗೆ ಹೇಗೆ ತೋಚಿದರೆ ಅದೇ ಜ್ಞಾನವೆಂದುಕೊಂಡು, ತನ್ನವರು ತಮ್ಮ ಹಿರಿಯರೆನ್ನುವವರು ಹೇಗೆ ಹೇಳಿದರೆ ಅದೇ ಜ್ಞಾನವೆಂದುಕೊಳ್ಳುವವರು ಎಂದಿಗೂ ದೈವ ಗ್ರಂಥದಲ್ಲಿನ ಸತ್ಯವನ್ನು ತಿಳಿಯಲಾರರು. ಯಾರಾದರೂ

ದೈವಗ್ರಂಥಗ ಬಗ್ಗೆ ಶ್ರದ್ಧೆಹೊಂದಿ ಬುದ್ಧಿವೊಂದರ ವಿಚಕ್ಷಣಾ ಜ್ಞಾನದಿಂದ ಕಣ್ತೆರೆದು ನೋಡಿದರೆ ವಾಕ್ಯದಲ್ಲಿನ ಸತ್ಯ ಸ್ವಲ್ಪಸ್ವಲ್ಪ ತಿಳಿಯಬಲ್ಲದು. ಮನುಷ್ಯ ಎಲ್ಲಿಯಾದರೂ ತಪ್ಪು ಭಾವನೆಯಿಂದ ಜ್ಞಾನವಾಕ್ಯವನ್ನು ತಪ್ಪಾಗಿ ಅರ್ಥಮಾಡಿಕೊಂಡರೆ ನಾವು ಜೋಕ್ಯ ಮಾಡಿಕೊಂಡು ನಮ್ಮ ಅನುಭವದ ಪ್ರಕಾರ ವಿವರಿಸಿ ಹೇಳಿ ಇದು ತಪ್ಪು, ಇದು ಸರಿ ಎಂದು ಹೇಳಿದರೂ ಅದನ್ನು ಅರ್ಥ ಮಾಡಿಕೋಳ್ಳದೆ ನಮ್ಮ ದಾರಿಯೇ ಸರಿಯಾದ ದಾರಿ ಎನ್ನುವವರು ಇದ್ದಾರೆ. ಪ್ರತಿಯೊಂದಕ್ಕು ಶಾಸ್ತ್ರವನ್ನು ಅನುಸರಿಸಿ, ಶಾಸ್ತ್ರ ಪ್ರಮಾಣವನ್ನು ಅನುಸರಿಸಿ ನಮಗೆ ಅರ್ಥವಾಗಿರುವುದು ತಪ್ಪೋ, ಒಪ್ಪೋ ಲೆಕ್ಕಹಾಕಿ ನೋಡಿಕೊಳ್ಳಬಹುದು. ಆದರೇ ಹಾಗೆ ಯಾರೂ ನೋಡಿಕೊಳ್ಳದೆ ತನಗೆ ತಿಳಿದಿರುವುದೇ ಸತ್ಯ ಎಂದು ಕೊಳ್ಳುತ್ತಿದ್ದಾರೆ. ಒಂದು ವರ್ಷ ಜ್ಞಾನದೊಳಗೆ ಬಂದವರು ಕೂಡಾ ಜ್ಞಾನದಲ್ಲಿ ಐವತ್ತು (50) ವರ್ಷಗಳ ಅನುಭವವಿರುವ ವ್ಯಕ್ತಿಯನ್ನು ಕೂಡಾ ಧಿಕ್ಕರಿಸಿ ಮಾತನಾಡುತ್ತ ಅವರು ಎಷ್ಟೋ ಅನುಭವದಿಂದ ಹೇಳುವ ಮಾತುಗಳನ್ನು ಕೂಡಾ ಲೆಕ್ಕಮಾಡುತ್ತಿಲ್ಲ. ಆದ್ದರಿಂದ ಈದಿನ ಭೂಮಿಮೇಲೆ ಅಧರ್ಮಗಳು ಬೆಳೆದು ಹೋಗಿವೆಯೆಂದು ಹೇಳಬಹುದು. ಅಧರ್ಮಗಳು ಬೆಳೆದುಹೋಗಿ ದೈವಗ್ರಂಥಗಳ ಜ್ಞಾನ ತಪ್ಪಾಗಿ ಅರ್ಥವಾಗುತ್ತಿರುವ ಈ ಕಾಲದಲ್ಲಿ ಧರ್ಮಗಳನ್ನು ತಿಳಿಸಿ ಮನುಷ್ಯರನ್ನು ಜ್ಞಾನವಂತರನ್ನಾಗಿ ಮಾಡುವುದಕ್ಕೆ ದೇವರು ಅವತರಿಸಬೇಕಾದ ಸಮಯ ಆಸನ್ನವಾಗಿದೆಯೆಂದೇ ಹೇಳಬಹುದು.

**16) ಪ್ರಶ್ನೆ :– ದೈವಗ್ರಂಥದಲ್ಲಿ ಕರ್ಮವನ್ನು ಸುಟ್ಟು ಇಲ್ಲದಂತೆ ಮಾಡುವ ಜ್ಞಾನವನ್ನು ಹೇಳಿದ್ದಾನಾ? ಇಲ್ಲವೆ ಕರ್ಮಕ್ಕೆ ಸಂಬಂಧಿಸಿದ ಪ್ರಪಂಚ ವಿಷಯಗಳನ್ನು ಹೇಳಿದ್ದಾನಾ? ಮೂರು ದೈವಗ್ರಂಥಗಳಲ್ಲಿ ಪ್ರಪಂಚ ವಿಷಯಗಳು ಇರಬೇಕಾ? ದೇವರ ವಿಷಯಗಳಿರಬೇಕಾ? ನಾನು ಒಂದು ದೈವ ಗ್ರಂಥದಲ್ಲಿ ಗಂಡಹೆಂಡತಿ ಸಂಸಾರ ಮಾಡುವ ವಿಷಯವನ್ನು, ಆಹಾರ ಪಾನೀಯಗಳಲ್ಲಿ ನಿಷೇಧಿಸಲ್ಪಟ್ಟ ಆಹಾರವನ್ನು, ಆಸ್ತಿಗಳು ಹಂಚಿಕೊಳ್ಳುವ ವಿಷಯ ಬರೆದು, ಅದನ್ನು ಕೂಡಾ**

**ಧರ್ಮವೆಂದು ಹೇಳಿದ್ದಾರೆ. ಇವು ಪ್ರಪಂಚ ವಿಷಯಗಳು ಆಗುತ್ತವೆ ಅಲ್ಲವೆ! ಅವುಗಳನ್ನು ಕುರಿತು ಹೇಳಬೇಕಾದ ಅಗತ್ಯ ದೇವರಿಗೆ ಏನಿದೆ? ಏಕೆ ಹಾಗೆ ಹೇಳಿದ್ದಾರೆ? ಅವುಗಳಿಂದ ಆಧ್ಯಾತ್ಮಿಕದಲ್ಲಿ ಸ್ವಲ್ಪಮಟ್ಟಿನ ಲಾಭವಾದರೂ ಇದೆಯಾ?**

**ಉತ್ತರ :–** ದೇವರು ಹೇಳಿದ ಮೂರು ವಿಧಾನಗಳ ಪ್ರಕಾರ ಹೇಳಲ್ಪಟ್ಟಿರುವವು ಮೂರು ದೈವಗ್ರಂಥಗಳು. ಮೂರು ದೈವಗ್ರಂಥಗಳು ಮೊದಲು ಬೋಧನೆ ರೂಪದಲ್ಲಿ ಬಂದಿವೆ. ಬೋಧನೆರೂಪದಲ್ಲಿ ಬಂದಿರುವವೇ ಗ್ರಂಥರೂಪದಲ್ಲಿ ಬರೆಯಲ್ಪಟ್ಟಿವೆ. ಮೊದಲು ಬೋಧನೆಯಾಗಿ ಬಂದಾಗ ಅದರಲ್ಲಿ ದೇವರು ಹೇಳಿದ ಭಾವನೆಯೇ ಇರುತ್ತಿತ್ತು. ನಂತರ ಅದನ್ನು ಕೇಳಿದವರಿಗೆ ಸ್ವಲ್ಪ ಭಾವನೆ ಬೇರೆವಿಧವಾಗಿ ಅರ್ಥವಾಗುವುದರಿಂದ ಅವರು ಇತರರೊಂದಿಗೆ ಹೇಳಿದಾಗ ಖಚಿತವಾಗಿ ದೇವರ ಭಾವನೆಯನ್ನು ತಿಳಿಸಲಾರದೆ ಹೋಗಿದ್ದಾರೆ. ದೇವರು ಹೇಳಿದ ಬೋಧನೆಯಲ್ಲಿ ಶೇ.ನೂರ (100) ರಷ್ಟು ಜ್ಞಾನ ಇರುವಾಗ, ಮನುಷ್ಯರು ಕೇಳಿಸಿಕೊಂಡಾಗ ಕನಿಷ್ಠ ಶೇ.ಹತ್ತರಷ್ಟು ಬೇರೆಯಾಗಿ ಅರ್ಥವಾಗಿರುತ್ತದೆ. ದೇವರು ಹೇಳಿರುವುದು ಕೇಳಿದರೂ ಮನುಷ್ಯನಿಗಿರುವ ಗುಣ ಭಾವನೆಗಳಿಂದ ದೇವರು ಹೇಳಿರುವುದು ಹೇಳಿದಂತೆ ಅರ್ಥವಾಗದೆ ಸ್ವಲ್ಪ ಪಕ್ಕದಭಾವನೆ ಹಿಡಿದು ಹೋಗಿರುವುದರಿಂದ ಕೇಳಿಸಿಕೊಂಡ ಮನುಷ್ಯನೊಳಗೆ ಶೇ.90ರಷ್ಟು ಜ್ಞಾನ ಏರಿರುತ್ತದೆ. ಕೇಳಿದವನು ಇನ್ನೊಬ್ಬನೊಂದಿಗೆ ಹೇಳಿ ತಾನು ಕೇಳಿದ ಬೋಧನೆಯನ್ನು ಬರೆಯಿಸುವುದರಿಂದ ಅಲ್ಲಿ ಕೂಡಾ ಸ್ವಲ್ಪ ಜ್ಞಾನವನ್ನು ನಷ್ಟಹೋಗುತ್ತಿದ್ದೇವೆ. ಎರಡನೆಯವನಿಂದ ಮೂರನೆಯವನು ಕೇಳಿದಾಗ ಎರಡನೆಯವನು ತನಗೆ ತಿಳಿದ ಶೇ,90 ರಷ್ಟು ಜ್ಞಾನವನ್ನು ಹೇಳಿದಾಗ ಕೇಳಿದ ಮೂರನೆಯವನಿಗೆ ಹೇಳಿದರೂ ಶೇ. 90ರಲ್ಲಿ ಹತ್ತರಷ್ಟು ಕಡಿಮೆಯಾಗಿ ಅರ್ಥವಾಗುವುದರಿಂದ ಮೂರನೆಯವನಿಗೆ ಶೇ.80ರಷ್ಟು ಮಾತ್ರವೇ ಅರ್ಥವಾಗಿ ತನಗೆ ಅರ್ಥವಾದ ಶೇ.80 ರಷ್ಟು ಜ್ಞಾನವನ್ನೇ ಗ್ರಂಥ ರೂಪವಾಗಿ ಬರೆಯುವುದು ನಡೆಯುತ್ತಿದೆ.

ಇದು ಅಕ್ಷರಶಃ ಭಗವದ್ಗೀತೆ ವಿಷಯದಲ್ಲಿ ನಡೆದಿದೆ. ಕೃಷ್ಣನು ಯುದ್ಧ ರಂಗದಲ್ಲಿ ಯುದ್ಧ ಪ್ರಾರಂಭವಾಗದ ಮುನ್ನ ಅರ್ಜುನನಿಗೆ ಕೃಷ್ಣನು ಜ್ಞಾನವನ್ನು ಬೋಧಿಸಿದ್ದಾನೆ. ಕೃಷ್ಣನು ಆಗ ಮೊದಲನೆಯವನಾಗಿದ್ದು ಜ್ಞಾನವನ್ನು ಬೋಧಿಸಿದಾಗ, ಅರ್ಜುನನು ಎರಡನೆಯವನಾಗಿದ್ದು ಜ್ಞಾನವನ್ನು ಕೇಳಿದ್ದಾನೆ. ಕೇಳಿದಾಗಲೇ ಕೆಲವು ವಿಷಯಗಳು ಅರ್ಥವಾಗದೆ ಪುನಃ ಪ್ರಶ್ನಿಸಿದ್ದಾನೆ. ಆಗ ತಕ್ಷಣ ಕೃಷ್ಣನು ಉತ್ತರ ಹೇಳಿದ್ದಾನೆ. ಕೆಲವು ಸಂಶಯಗಳು ಬಂದರೂ ಅವುಗಳನ್ನು ಪ್ರಶ್ನಿಸಲಿಲ್ಲ. ತಾನೇ ತನ್ನ ನಿರ್ಣಯದ ಪ್ರಕಾರ ಉತ್ತರವನ್ನು ನಿರ್ಣಯಿಸಿ ಕೊಂಡಿದ್ದಾನೆ. ಈ ವಿಧವಾಗಿ ಕೇಳಿಸಿಕೊಂಡ ಅರ್ಜುನನು ಕೃಷ್ಣನು ಹೇಳಿದ ಜ್ಞಾನವನ್ನು ಶೇ.ಹತ್ತರಷ್ಟು ಕಳೆದುಕೊಂಡು ಶೇ.90ರಷ್ಟು ಮಾತ್ರ ಅರ್ಥಮಾಡಿ ಕೊಂಡಿದ್ದಾನೆ. ಶೇ.ಹತ್ತರಷ್ಟು ನಷ್ಟಹೋದ ಅರ್ಜುನನು ತಾನು ತಿಳಿದುಕೊಂಡ ಶೇ.90ರಷ್ಟು ಜ್ಞಾನವನ್ನು ವ್ಯಾಸನಬಳಿಗೆ ಹೋಗಿ ಹೇಳುವುದು ನಡೆದಿದೆ. ಮೂರನೆಯವನಾದ ವ್ಯಾಸನು ಅರ್ಜುನನು ಹೇಳಿದ ಶೇ.90ರಷ್ಟು ಜ್ಞಾನವನ್ನು ಕೇಳಿದರೂ ಅದರಲ್ಲಿ ಶೇ. ಐದರಷ್ಟು ಹೊರತುಪಡಿಸಿ ಉಳಿದ ಶೇ.85ರಷ್ಟು ಜ್ಞಾನವನ್ನು ಗ್ರಹಿಸಿದ್ದಾನೆ. ವ್ಯಾಸನು ತಾನು ಗ್ರಹಿಸಿದ ಶೇ.85 ರಷ್ಟು ಜ್ಞಾನವನ್ನು ಭಗವದ್ಗೀತೆ ಗ್ರಂಥರೂಪದಲ್ಲಿ ಬರೆದಿದ್ದಾನೆ. ನಂತರ ಭಗವದ್ಗೀತೆಯೊಳಗೆ ಶೇ.15ರಷ್ಟು ಅಜ್ಞಾನ ಬಂದು ಸೇರಿದೆ. ಹೀಗೆ ಭಗವದ್ಗೀತೆ ತಯಾರಾದರೂ ಅದರಲ್ಲಿ ಶೇ.85 ರಷ್ಟು ಜ್ಞಾನ ಶೇ.15 ರಷ್ಟು ಅಜ್ಞಾನದಿಂದ ಇದೆಯೆಂದು ಹೇಳಬಹುದು. ಈ ವಿಧವಾಗಿ ಮೊದಲು ಶೇ.100 ರಷ್ಟು ಜ್ಞಾನವಿರುವ ಬೋಧನೆ ಗ್ರಂಥರೂಪ ಆಗುವಷ್ಟರಲ್ಲಿ ಶೇ.85 ರಷ್ಟು ಜ್ಞಾನ ಅದರಲ್ಲಿ ಉಳಿದಿದೆ, ಹಾಗೇ ಶೇ. 15 ರಷ್ಟು ಅಜ್ಞಾನ ಸ್ಥಳ ಮಾಡಿಕೊಂಡಿದೆ.

ಪ್ರಥಮ ದೈವಗ್ರಂಥ ಈದಿನ ಭಗವದ್ಗೀತೆ ಎನ್ನುವ ಗ್ರಂಥರೂಪ ವಾಗಿದ್ದರೂ, ಅದನ್ನು ಸ್ವತಃವಾಗಿ ವ್ಯಾಸನು ಮೂರನೆಯವನಾಗಿ ಕೇಳಿ ಬರೆದರೂ ಅದರಲ್ಲಿ ಶೇ.85 ರಷ್ಟು ಜ್ಞಾನ ಉಳಿದಿದೆ. ಈಗ ಅಂತಿಮ ದೈವ ಗ್ರಂಥವಾದ ಖುರ್‌ಆನ್ ವಿಷಯವನ್ನು ನೋಡಿದರೆ ಹೀಗೆ ಇದೆ. ಆಕಾಶವಾಣಿ ಜ್ಞಾನವನ್ನು

ಕೇಳಿದ ಜಿಬ್ರಯೇಲ್ (ಸೂರ್ಯನು) ತಾನು ಕೃತಯುಗದಲ್ಲಿ ಮನುವಿಗೆ ತೆಲುಗಿನಲ್ಲಿ ಹೇಳಿದ ಜ್ಞಾನವನ್ನೇ ಕಲಿಯುಗದಲ್ಲಿ ಮುಹಮ್ಮದ್ ಪ್ರವಕ್ತರವರಿಗೆ ಅರಬ್ಬೀ ಭಾಷೆಯಲ್ಲಿ ಹೇಳಿದ್ದಾನೆ. ಜಿಬ್ರಯೇಲ್ ಪ್ರವಕ್ತರವರಿಗೆ ಹೇಳಿದಾಗ ಶೇ. ನೂರರಷ್ಟು ಜ್ಞಾನವನ್ನು ಹೇಳಿದರೆ, ಪ್ರವಕ್ತರವರು ಅರ್ಥ ಮಾಡಿಕೊಳ್ಳುವುದ ರಲ್ಲಿ ಸ್ವಲ್ಪ ಗೊಂದಲಗೊಂಡಿರುವುದರಿಂದ, ಪ್ರವಕ್ತರವರಿಗೆ ಶೇ.90ರಷ್ಟು ಜ್ಞಾನ ಅರ್ಥವಾಗಿ ಶೇ.ಹತ್ತರಷ್ಟು ಅರ್ಥವಾಗದೆಹೋಗಿದೆ. ಪ್ರವಕ್ತ ತನಗೆ ಅರ್ಥವಾದ ಜ್ಞಾನವನ್ನು ತನ್ನ ಅನುಚರರಿಗೆ ಹೇಳಿದಾಗ, ಅವರು ಶೇ.ಹತ್ತರಷ್ಟು ಕಳೆದುಕೊಂಡು ಶೇ.80 ರಷ್ಟು ಜ್ಞಾನವನ್ನೇ ಅರ್ಥ ಮಾಡಿ ಕೊಂಡಿದ್ದಾರೆ. ಪ್ರವಕ್ತರವರು ಮರಣಿಸಿದ ನಂತರ ಖುರಾನ್ ಗ್ರಂಥ ತಯಾರಾಗಿದೆಯೆಂದು ಕೆಲವರು, ಇಲ್ಲ ಪ್ರವಕ್ತರವರು ಇರುವಾಗಲೇ ಖುರಾನ್ ಗ್ರಂಥ ತಯಾರಾಗಿದೆಯೆಂದು ಕೆಲವರು ಹೇಳುತ್ತಿದ್ದಾರೆ. ಪ್ರವಕ್ತರವರ ಜೀವನ ಚರಿತ್ರೆಯಲ್ಲಿ ಎಲ್ಲಿಯೂ ಖುರ್‌ಆನ್ ಗ್ರಂಥ ಪ್ರಸ್ತಾಪ ಇಲ್ಲದಿರುವುದರಿಂದ ಪ್ರವಕ್ತ ಮರಣಿಸಿದ ನಂತರವೇ ಖುರ್‌ಆನ್ ಗ್ರಂಥ ತಯಾರಾಗಿದೆಯೆನ್ನುವ ವಾದನೆಯನ್ನೇ ನಂಬಬೇಕಾಗಿ ಬರುತ್ತಿದೆ. ಖುರ್‌ಆನ್ ಗ್ರಂಥವನ್ನು ಬರೆದಿರುವುದು ಓದು ಬಂದವರು. ಆ ದಿನ ಪ್ರವಕ್ತನ ಬೋಧನೆಗಳನ್ನು ಕೇಳಿರುವುದು ಓದುಬರದವರು, ಶೇ.80 ರಷ್ಟು ಅರ್ಥವಾದ ಪ್ರವಕ್ತ ಅನುಚರರು ಇತರರಿಗೆ ಹೇಳಿ ಗ್ರಂಥವನ್ನು ಬರೆಯಿಸಿದಾಗ, ಒಬ್ಬರಿಂದ ಮತ್ತೊಬ್ಬರಿಗೆ ಭಾವನೆ ಬದಲಾವಣೆ ನಡೆದಾಗ, ಕೂಡಾ ಶೇ. ಹತ್ತರಷ್ಟು ಜ್ಞಾನ ನಷ್ಟಹೋಗಿ ಕೇವಲ ಶೇ.70 ರಷ್ಟು ಜ್ಞಾನ ಗ್ರಂಥರೂಪವಾಗಿದೆ. ಈ ವಿಧವಾಗಿ ಖುರಾನ್ ಗ್ರಂಥ ಶೇ.70 ರಷ್ಟು ಜ್ಞಾನದೊಂದಿಗೆ ಇದೆಯೆಂದು ಹೇಳಬಹುದು. ಬೈಬಲ್ ಗ್ರಂಥ ಶೇ.60 ರಷ್ಟು ಜ್ಞಾನವನ್ನೇ ಹೊಂದಿದೆಯೆಂದು ಕೆಲವರು ಹೇಳಿದಾಗ ಕೇಳಿದ್ದೇವೆ.

ಹೀಗೆ ದೈವಗ್ರಂಥಗಳು ಸ್ವಲ್ಪ ಹೆಚ್ಚುಕಡಿಮೆಯಾಗಿ ಜ್ಞಾನವನ್ನು ಹೊಂದಿವೆ. ಭಗವದ್ಗೀತೆ ಶೇ.85 ರಷ್ಟು, ಖುರ್‌ಆನ್ ಶೇ.70 ರಷ್ಟು, ಬೈಬಲ್ ಶೇ.60 ರಷ್ಟು ಜ್ಞಾನ ಹೊಂದಿದೆಯೆಂದು ಕೆಲವರು ಹೇಳುವುದು ಕೇಳಿದ್ದೇವೆ. ಬೈಬಲ್

ವಿಷಯಕ್ಕೆ ಬಂದರೆ ನಾಲ್ಕು ಸುವಾರ್ತೆಗಳಲ್ಲಿ ಪೂರ್ತಿ ಜ್ಞಾನ ಬರೆಯಲ್ಪಟ್ಟಿದ್ದರೂ ಉಳಿದ ಗ್ರಂಥಗಳಲ್ಲಿ ಶೇ.40 ರಷ್ಟು ಅಜ್ಞಾನ ಸಂಬಂಧ ಕಲ್ಪಿತ ಬರಹಗಳಿವೆ ಯೆಂದು ಕೆಲವರು ಹೇಳುತ್ತಿದ್ದಾರೆ. ಅವರು ಹೇಳುವ ಗಣಿತ ವಿಧಾನ ಖಚಿತವಾಗಿ ಇಷ್ಟೇಯೆಂದು ನನಗೆ ನಂಬಿಕೆ ಇಲ್ಲ ಆದರೆ, ಸ್ವಲ್ಪ ಹೆಚ್ಚು ಕಡಿಮೆಯಾದರೂ ಇರಬಹುದೇನೊ ಹೇಳಲಾರೆವು. ಈ ಲೆಕ್ಕಪ್ರಕಾರ ಭಗವದ್ಗೀತೆಯಲ್ಲಿ ಶೇ.15 ರಷ್ಟು ಕಲ್ಪಿತ ಶ್ಲೋಕಗಳು, ಕಲ್ಪಿತ ಜ್ಞಾನ ಇರುತ್ತದೆಂದು ಹೇಳಬಹುದು. ಹಾಗೇ ಖುರ್‌ಆನ್ ಗ್ರಂಥದಲ್ಲಿ ಶೇ.30 ರಷ್ಟು ಮಾನವ ಕಲ್ಪಿತಗಳು ನಡೆದಿರಬಹುದು. ಬೈಬಲ್‌ನಲ್ಲಿ ಶೇ.40 ರಷ್ಟು ಕಲ್ಪಿತ ಜ್ಞಾನವಿರಬಹುದು.

ದೈವ ಗ್ರಂಥದಲ್ಲಿ ಮಾನವ ಕಲ್ಪಿತಗಳು ಎಂದರೇ ಯಾರಿಗಾದರೂ ಆಶ್ಚರ್ಯವಾಗಿಯೇ ಇರುತ್ತದೆ. ಒಂದುವೇಳೆ ಕಲ್ಪಿತ ಜ್ಞಾನ ಶೇ.ಸ್ವಲ್ಪ ಇದ್ದರೂ ಯಾವುದು ಕಲ್ಪಿತ ಜ್ಞಾನ, ಯಾವುದು ನಿಜವಾದ ಜ್ಞಾನವೆಂದು ಗುರುತಿಸುವುದು ಹೇಗೆಯೆಂದು ಪ್ರಶ್ನೆ ಬಾರದೆ ಇರುವುದಿಲ್ಲ. ಪ್ರಥಮ ದೈವ ಗ್ರಂಥ ಭಗವದ್ಗೀತೆ ಯನ್ನು ನೋಡಿದರೆ ಅದರಲ್ಲಿ ಶೇ.15 ರಷ್ಟು ಮನುಷ್ಯರ ಅಜ್ಞಾನ ಬೆರೆತಿದೆಯೆಂದು ಅಂದುಕೊಂಡಿದ್ದೇವೆ. ಉಳಿದ ಶೇ.85 ರಷ್ಟು ದೇವರ ಸ್ವಚ್ಛವಾದ ಜ್ಞಾನ ಇದೆ. ದೇವರ ಜ್ಞಾನದಲ್ಲಿ ಮನುಷ್ಯರ ಜ್ಞಾನ ಹೇಗೆ ಬೆರೆತಿದೆಯೋ ಗಮನಿಸಿದರೆ ಆಶ್ಚರ್ಯವಾಗದೆ ತಪ್ಪಲ್ಲ. ದೇವರ ಜ್ಞಾನದಲ್ಲಿ ಮನುಷ್ಯರು ತಮ್ಮ ಜ್ಞಾನವನ್ನು ಯಾರೂ ಗುರುತಿಸದ ವಿಧವಾಗಿ ಬೆರೆಸಿರುವುದು ಬಹಳ ಕೈಚಳಕದ ಕೆಲಸವಾಗಿ ಕಾಣಿಸುತ್ತಿದೆ. ಪ್ರಥಮ ದೈವ ಗ್ರಂಥ ಭಗವದ್ಗೀತೆಯಲ್ಲಿ ಮನುಷ್ಯರ ಜ್ಞಾನ ಸೇರಿರುವ ವಿಧಾನವನ್ನು ಒಂದುಸಲ ನೋಡೋಣ.

ಭಗವದ್ಗೀತೆ ಕರ್ಮಯೋಗದಲ್ಲಿ ಒಂಭತ್ತನೇ ಶ್ಲೋಕ ಮುಖ್ಯವಾದ ಗುರುತುಹೊಂದಿದ ಶ್ಲೋಕ. ಈ ಶ್ಲೋಕವನ್ನು ದೇವರೇ ಹೇಳಿದ್ದಾನೆ. ಸ್ವಚ್ಛವಾದ ದೈವಜ್ಞಾನದಿಂದ ಕೂಡಿಕೊಂಡ ಶ್ಲೋಕ. ಆದರೆ ಇಲ್ಲಿ ಮಾಯೆ ಕೆಲಸಮಾಡಿ ಅಜ್ಞಾನದ ಕಡೆಗೆ ಕಳಿಸುವುದಕ್ಕೆ ಕೂಡಾ ಅವಕಾಶವಿದೆ. ಈ ಶ್ಲೋಕವನ್ನು ಜ್ಞಾನದ ಪ್ರಕಾರ ಹೇಳಿಕೊಂಡರೆ ಪೂರ್ತಿ ಕರ್ಮಯೋಗಕ್ಕೆ ಸಂಬಂಧಿಸಿದ

ಶ್ಲೋಕ. ಈ ಶ್ಲೋಕದಲ್ಲಿ **"ಯಜ್ಞಾರ್ಥಾ ತ್ಕರ್ಮಣೋ ನ್ಯತ್ರ"** ಎನ್ನುವ ವಾಕ್ಯವಿದೆ. ಯಜ್ಞ ಸಂಬಂಧವಾದ ಕರ್ಮವನ್ನು ಆಚರಿಸದೆಹೋದರೆ ಪಾಪಪುಣ್ಯ ಕರ್ಮಗಳು ಅಂಟಿಕೊಳ್ಳುತ್ತವೆ ಎಂದು ಹೇಳುವುದಕ್ಕೆ ಈ ಶ್ಲೋಕವನ್ನು ಹೇಳಿದ್ದಾರೆ. ಆದರೆ ಈ ಶ್ಲೋಕ ಒಂದರ ವಿವರವನ್ನು ಆಳವಾಗಿ ಹೇಳಿಕೊಂಡರೆ ಜ್ಞಾನ ಸಂಬಂಧವಾಗಿ ಹೇಳಿಕೊಳ್ಳಬಹುದು. ಇಲ್ಲದಿದ್ದರೆ ಅಜ್ಞಾನ ಸಂಬಂಧವಾಗಿ ಬಾಹ್ಯಯಜ್ಞಗಳನ್ನು ಆಚರಿಸಿರೆಂದು ಕೂಡಾ ಹೇಳಬಹುದು. ಈ ಶ್ಲೋಕ ಕರ್ಮಯೋಗ ಸಂಬಂಧವಾದುದಾದರೂ, ಅದನ್ನು ಕೇವಲ ಬಾಹ್ಯ ಯಜ್ಞಾಚರಣೆ ಯಾಗಿ ಕೂಡಾ ಹೇಳುವುದಕ್ಕೆ ಅವಕಾಶ ಇರುವುದರಿಂದ, ಈ ಶ್ಲೋಕದ ಪಕ್ಕದಲ್ಲಿಯೇ ಮನುಷ್ಯರ ಕಲ್ಪಿತ ಶ್ಲೋಕಗಳನ್ನು ವರಸೆ ಕ್ರಮದಲ್ಲಿ ಏಳು ಶ್ಲೋಕಗಳನ್ನು ಬರೆದಿಟ್ಟಿದ್ದಾರೆ. ಹಾಗೆ ಬರೆದಿರುವುದರಿಂದ ಮೊದಲ ಕರ್ಮ ಯೋಗ ಶ್ಲೋಕ ಕೂಡಾ ಈ ಏಳು ಶ್ಲೋಕಗಳನ್ನು ಧೃಡೀಕರಿಸುವುದಾಗಿ ಪ್ರಪಂಚ ಸಂಬಂಧ ಅರ್ಥಕೊಡುವಂತೆ ಹೇಳಿಕೊಳ್ಳುವುದು ನಡೆದಿದೆ. ಇದನ್ನೆಲ್ಲಾ ನೋಡಿದರೆ ಎಷ್ಟೋ ತಿಳುವಳಿಕೆಯಿಂದ ಯಾರೂ ಗುರುತಿಸಲಾರದಂತೆ ಎಲ್ಲಿ ಬೆರೆಸಬೇಕೊ ಅಲ್ಲಿಯೇ ಬೆರೆಸಿದ್ದಾರೆ. ಅಲ್ಲಿಯೇ ಬೆರೆಸುವುದರಿಂದ ತಮ್ಮ ಶ್ಲೋಕಗಳಿಗಿಂತ ಮೊದಲಿರುವ ದೇವರ ಶ್ಲೋಕ ಕೂಡಾ ಮಾನವರ ಶ್ಲೋಕದಂತೆ ಬಾಹ್ಯ ಯಜ್ಞಸಂಬಂಧವಾದುದಾಗಿ ಕಾಣಿಸುತ್ತಿದೆ. ಇದು ಕರ್ಮ ಯೋಗದಲ್ಲಿ ಮಾಡಿದ ಪ್ರಯೋಗವಾಗಿದ್ದು, ನಂತರ ಜ್ಞಾನಯೋಗದಲ್ಲಿ ಇನ್ನೂ ದೊಡ್ಡ ಅದ್ಭುತವಾದ ಕೆಲಸ ಮಾಡಿದ್ದಾರೆಂದು ಹೇಳದೆ ತಪ್ಪಲ್ಲ.

ಜ್ಞಾನಯೋಗ ಎನ್ನುವ ಅಧ್ಯಾಯದಲ್ಲಿ ಮೊದಲು ಪ್ರಾರಂಭ ಕೊನೆಯಲ್ಲಿ ಮುಕ್ತಾಯ ಬಹಳ ದೊಡ್ಡದಾಗಿ ಯಾರೂ ಗುರುತಿಸದ ವಿಧವಾಗಿ ನಡೆದಿದೆಯೆಂದು ಹೇಳಬಹುದು. ಕರ್ಮಯೋಗವೆನ್ನುವ ಅಧ್ಯಾಯದಲ್ಲಿ **"ಯಜ್ಞಾರ್ಥಾ ತ್ಕರ್ಮಣ್ಯೋನ್ಯತ್ರ ಲೋಕೋಯಂ ಕರ್ಮಬಂಧನಃ"** ಎಂದು ಹೇಳಿದ ಕಡೆ ತಮ್ಮ ಕಲ್ಪಿತ ಶ್ಲೋಕಗಳನ್ನು ಜೋಡಿಸಿದ್ದಾರೆ. ಇಲ್ಲಿ ಜ್ಞಾನಯೋಗ ವೆನ್ನುವ ಅಧ್ಯಾಯದಲ್ಲಿ ಕರ್ಮಯೋಗದಲ್ಲಿನ ಶ್ಲೋಕದಲ್ಲಿನ ಅರ್ಥಕೊಡುವ

**"ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ"** ಎಂದು ಇರುವ 23ನೇ ಶ್ಲೋಕದ ಪಕ್ಕದಲ್ಲಿಯೇ ಒಂಭತ್ತು ಶ್ಲೋಕಗಳನ್ನು ಬೆರೆಸಿದ್ದಾರೆ. ವಾಸ್ತವವಾಗಿ ದೇವರು ಹೇಳಿದ ಶ್ಲೋಕಗಳು 23ನೆಯದು ಮುಗಿದುಹೋಗುತ್ತಲೇ 24ನೇ ಶ್ಲೋಕ **"ಶ್ರೇಯಾನ್ ದ್ರವ್ಯಮಯಾ ದ್ಯಜ್ಞಾತ್"** ಎನ್ನುವ ಶ್ಲೋಕವಿರಬೇಕು. ಆದರೆ 23, 24 ಶ್ಲೋಕಗಳ ಮಧ್ಯ ಒಟ್ಟು 9 ಶ್ಲೋಕಗಳನ್ನು ಬೆರೆಸಿರುವುದರಿಂದ **"ಶ್ರೇಯಾನ್ ದ್ರವ್ಯಮಯಾ ದ್ಯಜ್ಞಾತ್"** ಎನ್ನುವ ಶ್ಲೋಕ 33ನೇ ನಂಬರ್‌ನಿಂದ ಪ್ರಾರಂಭವಾಗಿದೆ. 23ನೇ ಶ್ಲೋಕದಲ್ಲಿ ಯಜ್ಞ ಎನ್ನುವ ಹೆಸರಿರುವುದರಿಂದ ಇಲ್ಲಿ ಸೇರಿಸಿದರೆ ಸರಿಹೋಗುತ್ತದೆಂದು, ನಂತರ ಮುಕ್ತಾಯ ಕೂಡಾ ಯಜ್ಞಗಳ ಹೆಸರೇ ಇರುವುದರಿಂದ ಕಲ್ಪಿತ ಶ್ಲೋಕಗಳು ಕೂಡಾ ಯಜ್ಞಗಳವೇ ಆಗಿರುವುದರಿಂದ ಸಾಮಾನ್ಯವಾಗಿ ಯಾರೂ ಗುರುತು ಹಿಡಿಯುವುದಿಲ್ಲವೆನ್ನುವ ಅಭಿಪ್ರಾಯದಿಂದ ನೇರವಾಗಿ ಒಂಭತ್ತು ಶ್ಲೋಕಗಳನ್ನು ಬೆರೆಸಿದ್ದಾರೆ. ಯಜ್ಞಗಳೆನ್ನುವ ಹೆಸರಿರುವ ಎರಡು ಶ್ಲೋಕಗಳ ಮಧ್ಯದಲ್ಲಿ ಕಲ್ಪಿತ ಶ್ಲೋಕಗಳು ಕೂಡಾ ಯಜ್ಞಗಳೆನ್ನುವ ಹೆಸರಿನಿಂದ ಇರುವುದರಿಂದ ಅವುಗಳನ್ನು ಇಲ್ಲಿಯವರೆಗು ಯಾರೂ ಕಲ್ಪಿತ ಶ್ಲೋಕಗಳೆಂದು ಗುರುತಿಸದೇ ಹೋಗಿದ್ದಾರೆ.

ಜ್ಞಾನಯೋಗದಲ್ಲಿ 23ನೇ ಶ್ಲೋಕದಲ್ಲಿ "ಯಜ್ಞ ಕರ್ಮಗಳಿಂದ ಕರ್ಮ ಅಂಟುವುದಿಲ್ಲ" ಎಂದು ಹೇಳಿದ್ದಾನೆ. ಅದರ ನಂತರದ ಶ್ಲೋಕಗಳಲ್ಲಿ ಯಜ್ಞಗಳು ಎರಡು ವಿಧಗಳು ಇವೆಯೆಂದು ದ್ರವ್ಯಯಜ್ಞ, ಜ್ಞಾನಯಜ್ಞ ಎಂದು ಹೇಳಿದ್ದಾನೆ. ಈ ವಿಧವಾಗಿ ಮೇಲೆ ಕೆಳಗೆ ಯಜ್ಞಗಳ ಹೆಸರುಗಳಿರುವ ಎರಡು ಶ್ಲೋಕಗಳ ಮಧ್ಯದಲ್ಲಿ ಅದೇ ಯಜ್ಞಗಳ ಹೆಸರುಗಳಿರುವ ಒಂಭತ್ತು ಶ್ಲೋಕಗಳನ್ನು ಬೆರೆಸಿರುವುದರಿಂದ ಅವುಗಳನ್ನು ಗುರುತಿಸುವುದು ಯಾರಿಗೂ ಕೈಲಾಗಲಿಲ್ಲ. ಹೀಗೆ ತಿಳುವಳಿಕೆಯನ್ನು ಉಪಯೋಗಿಸಿ ತಮ್ಮ ಪ್ರಾಧಾನ್ಯತೆಗಾಗಿ ಕೆಲವರು ತಾವು ಸೃಷ್ಠಿಸಿದ ಜ್ಞಾನವನ್ನು ದೇವರ ಜ್ಞಾನದ ಮಧ್ಯದಲ್ಲಿ ಸಿಲುಕಿಸಿ ತಮ್ಮ ಜ್ಞಾನ ಕೂಡಾ ದೇವರ ಜ್ಞಾನವಾಗಿ ಚಲಾವಣೆ ಆಗುವಹಾಗೆ ಮಾಡಿದ್ದಾರೆ. ಇದು ಮೊದಲು ಹುಟ್ಟಿದ ಒಂದು ಭಗವದ್ಗೀತೆಗೇ ಪರಿಮಿತಿ ಆಗಲಿಲ್ಲ. ಈ

ಜಾಢ್ಯ ಉಳಿದ ದೈವಗ್ರಂಥಗಳಿಗೆ ಕೂಡಾ ಹರಡಿದೆ. ಇದೆಲ್ಲವೂ ದೇವರಿಗೆ ತಿಳಿಯದೇ ಏನು ನಡೆಯಲಿಲ್ಲ. ಕೆಲವರನ್ನು ತಪ್ಪುದಾರಿ ಹಿಡಿಸಿ ತನಗೆ ದೂರವಾಗಿ ಹೋಗವಂತೆ ದೇವರು ರಚಿಸಿದ ವಾಕ್ಯಗಳಲ್ಲಿ ಇದು ಒಂದುವಿಧವೆಂದು ಹೇಳಬಹುದು. ಆದ್ದರಿಂದ ಮೂರು ಗ್ರಂಥಗಳಲ್ಲಿ ಸ್ವಲ್ಪಕ್ಕೆ ಸ್ವಲ್ಪ ಮಾನವರ ಕಲುಷಿತ ಜ್ಞಾನ ದೈವಗ್ರಂಥಗಳಲ್ಲಿ ಸೇರಿಹೋಗಿದೆಯೆಂದು ಹೇಳಬಹುದು.

ಖುರ್‌ಆನ್ ನೊಳಗೆ ಬಂದು ನೋಡಿದರೆ ಭಗವದ್ಗೀತೆಯೊಳಗಿಂತ ಕೂಡಾ ಹೆಚ್ಚಾಗಿ ಕಲುಷಿತ ವಾಕ್ಯಗಳಿರುವಂತೆ ತಿಳಿಯುತ್ತಿದೆ. ಭಗವದ್ಗೀತೆಯಂತೆ ಖುರ್‌ಆನ್‌ನಲ್ಲಿ ಸಂದರ್ಭಾನುಸಾರ ತಿಳಿಯದೇ ವಾಕ್ಯಗಳನ್ನು ಬೆರೆಸಿಲ್ಲ. ಕಲುಷಿತ ವಾಕ್ಯಗಳಿರುವಂತೆ ರೂಢಿ ಏನು ಎಂದು ಯಾರಾದರೂ ಕೇಳಬಹುದು. ಅದಕ್ಕೆ ಶಾಸ್ತ್ರಬದ್ಧವಾದ ಆಧಾರವನ್ನು ತೋರಿಸಬೇಕಾಗಿರುತ್ತದೆ. ಶಾಸ್ತ್ರಬದ್ಧವಾದ ಆಧಾರವನ್ನು ತೋರಿಸುವಾಗ, ವಾಸ್ತವವಾಗಿ ಅಲ್ಲಿ ಇರುವುದು ದೇವರು ಹೇಳಿರುವುದಲ್ಲ, ಮನುಷ್ಯರು ಸೃಷ್ಟಿಸಿರುವುದೇಯೆಂದು ಸಂಪೂರ್ಣವಾಗಿ ತಿಳಿಯುತ್ತದೆ. ಇಲ್ಲಿ ಮತ್ತೊಂದು ವಿಷಯವನ್ನು ದೃಷ್ಟಿಯಲ್ಲಿ ಇಟ್ಟುಕೊಳ್ಳಬೇಕಾದ ಅವಶ್ಯಕತೆ ಇದೆ. ಅದೇನೆಂದರೆ! ಭಗವದ್ಗೀತೆಗಿಂತ, ಬೈಬಲ್‌ಗಿಂತ, ಖುರ್‌ಆನ್ ಗ್ರಂಥದಲ್ಲಿ ಸ್ಥೂಲ, ಸೂಕ್ಷ್ಮವೆನ್ನುವ ಎರಡು ವಿಧಗಳ ವಾಕ್ಯಗಳು ಇವೆ. ಸ್ಥೂಲವಾಕ್ಯಗಳು ಎಲ್ಲಾ ಗ್ರಂಥಗಳಲ್ಲಿ ಇರುತ್ತವೆ. ಆದರೆ ಸೂಕ್ಷ್ಮವಾಕ್ಯಗಳು ಪ್ರತ್ಯೇಕವಾದವು ಸಾಧಾರಣವಾಗಿ ಎಲ್ಲಾ ಗ್ರಂಥದಲ್ಲಿ ಇರುವುದಿಲ್ಲ. ಖುರ್‌ಆನ್ ಗ್ರಂಥಗಳಲ್ಲಿ ಉಳಿದ ಎರಡು ಗ್ರಂಥಗಳಲ್ಲಿ ಇಲ್ಲದ ಸೂಕ್ಷ್ಮವಾಕ್ಯಗಳು ಇವೆ. ಭಗವದ್ಗೀತೆ, ಬೈಬಲ್ ಎನ್ನುವ ಎರಡು ಗ್ರಂಥಗಳಲ್ಲಿ ದೇವರು ಪ್ರಜೆಗಳಿಗೆ ಜ್ಞಾನವನ್ನು ಸ್ಥೂಲವಾಗಿಯೇ ಬೋಧಿಸಿದ್ದಾನೆ. ಎರಡು ಗ್ರಂಥಗಳಲ್ಲಿ ಬೋಧಿಸಿದ ಸುಲಭವಾದ ಸ್ಥೂಲವಾಕ್ಯಗಳನ್ನೇ ಮನುಷ್ಯ ಗ್ರಹಿಸಿಕೊಳ್ಳದ ಪರಿಸ್ಥಿತಿಯಲ್ಲಿ ತಪ್ಪಾಗಿ ಅರ್ಥ ಮಾಡಿಕೊಳ್ಳುವುದು ನಡೆಯುತ್ತಿದೆ. ಹಾಗಿರುವಾಗ ಸೂಕ್ಷ್ಮವಾಗಿ ಹೇಳಿದ ವಾಕ್ಯಗಳನ್ನು ಅರ್ಥ ಮಾಡಿಕೊಳ್ಳುವುದು ಮತ್ತಷ್ಟು ಕಷ್ಟವಾಗಿ ಇರುತ್ತದೆ. ವಾಕ್ಯದಲ್ಲಿ ಅರ್ಥ ಕಾಣಿಸುವಂತೆ ಬರೆಯುವುದನ್ನು ಸ್ಥೂಲವಾಕ್ಯಗಳೆಂದು

ಹೇಳುತ್ತಿದ್ದೇವೆ. ವಾಕ್ಯದಲ್ಲಿ ಅರ್ಥ ಕಾಣಿಸದಂತೆ ಒಳಗೊಂಡಿರುವಂತೆ ಬರೆಯುವುದನ್ನು ಸೂಕ್ಷ್ಮವಾಕ್ಯಗಳೆಂದು ಕರೆಯುತ್ತಿದ್ದೇವೆ.

ಅಂತಿಮ ದೈವ ಗ್ರಂಥ ಖುರ್‌ಆನ್ ಗ್ರಂಥದಲ್ಲಿ ಜಿಬ್ರಯೇಲ್ ಹೇಳಿದ ಜ್ಞಾನ ವಾಕ್ಯಗಳಲ್ಲಿ ಬಹಳಮಟ್ಟಿಗೆ ಅಂದರೇ ಹೆಚ್ಚಾಗಿ ಸೂಕ್ಷ್ಮವಾಕ್ಯಗಳೇ ಇವೆ. ಅವುಗಳನ್ನು ಗುರುತಿಸಿ ಇವು ಸೂಕ್ಷ್ಮವಾಕ್ಯಗಳೆಂದು ತಿಳಿಯದೆ ಹೋದರೆ ಆ ವಾಕ್ಯಗಳಲ್ಲಿ ಹೇಳಿದ ವಿಷಯ ಸ್ವಲ್ಪವೂ ಅರ್ಥವಾಗುವುದಿಲ್ಲ. ಅಂತಹ ವಾಕ್ಯಗಳು ಹೇಗೆ ಇರುತ್ತವೊ? ಅವುಗಳಲ್ಲಿನ ಅರ್ಥವನ್ನು ಹೇಗೆ ಗ್ರಹಿಸಬೇಕೋ ತಿಳಿಯುವುದಕ್ಕೆ ಗುರುತಾಗಿ, ಉದಾಹರಣೆಯಾಗಿ ಒಂದು ವಾಕ್ಯವನ್ನು ತೆಗೆದುಕೊಂಡು ವಿವರಿಸಿಕೊಂಡು ನೋಡೋಣ.

ಈಗ ಎರಡನೆ ಸೂರಾದಲ್ಲಿ 187ನೇ ಆಯತ್ ಅನ್ನು ಇಲ್ಲಿ ನೋಡೋಣ. **(2–187) "ಉಪವಾಸ ರಾತ್ರಿಗಳಲ್ಲಿ ನೀವು ನಿಮ್ಮ ಪತ್ನಿಯರೊಂದಿಗೆ ಸೇರುವುದು ನಿಮ್ಮಗೋಸ್ಕರ ಧರ್ಮ ಸಮ್ಮತ ಮಾಡಲ್ಪಟ್ಟಿದೆ. ಅವರು ನಿಮಗೆ ವಸ್ತ್ರಗಳು, ನೀವು ಅವರಿಗೆ ವಸ್ತ್ರಗಳು. ನೀವು ರಹಸ್ಯವಾಗಿ ಆತ್ಮದ್ರೋಹಕ್ಕೆ ಪಾಲ್ಪಡುತ್ತಿದ್ದಾರೆನ್ನುವ ಸಂಗತಿ ಅಲ್ಲಾಹ್‌ಗೆ ತಿಳಿದಿದೆ. ಆದರೂ ಆತನು ಕ್ಷಮಾ ಗುಣಗಳಿಂದ ನಿಮ್ಮ ಕಡೆಗೆ ಮರಳಿ, ನಿಮ್ಮ ತಪ್ಪನ್ನು ಮನ್ನಿಸಿದ್ದಾನೆ. ಇಲ್ಲಿಂದ ನೀವು ನಿಮ್ಮ ಪತ್ನಿಯರೊಂದಿಗೆ ಉಪವಾಸ ರಾತ್ರಿಗಳಲ್ಲಿ ರಮಿಸುವುದಕ್ಕೆ, ಅಲ್ಲಾಹ್ ನಿಮಗಾಗಿ ಬರೆದಿಟ್ಟಿರುವುದನ್ನು ಅನ್ವೇಷಿಸುವುದಕ್ಕೆ ನಿಮಗೆ ಅನುಮತಿಯಿದೆ. ಬೆಳಗಿನಜಾವದಲ್ಲಿನ ಬಿಳುಪು ನಡುರಾತ್ರಿ ಕಪ್ಪನೆಯ ಛಾಯೆಯಿಂದ ಪ್ರಸ್ಫುಟ ವಾಗುವರೆಗು ತಿನ್ನಿರಿ, ಕುಡಿಯಿರಿ, ಆ ನಂತರ ಇವುಗಳೆಲ್ಲವನ್ನು ಪರಿತ್ಯಜಿಸಿ ರಾತ್ರಿ ಕತ್ತಲಾಗುವವರೆಗು ಉಪವಾಸ ಇರಿ. ಇನ್ನೂ ನೀವು ಮಸ್ಜಿದ್‌ಗಳಲ್ಲಿ "ಎತ್‌ಕಾಫ್" ಪಾಟಿಸುವ ಕಾಲದಲ್ಲಿ ಮಾತ್ರ ನಿಮ್ಮ ಪತ್ನಿಯರೊಂದಿಗೆ ಸಮಾಗಮ ನಡೆಸಬೇಡಿ. ಇವು ಅಲ್ಲಾಹ್ ನಿರ್ಧಾರಿಸಿದ ಹದ್ದುಗಳು. ನೀವು ಅವುಗಳ ಆಸುಪಾಸಿಗು ಕೂಡಾ ಹೋಗಬೇಡಿ. ಪ್ರಜೆಗಳು ಅಪ್ರಮತ್ತವಾಗಿ ಇರುವುದಕ್ಕಾಗಿ ಅಲ್ಲಾಹ್ ತನ್ನ ಆಯತ್‌ಗಳನ್ನು ಹೀಗೆ ಬಿಡಿಸಿ ಹೇಳುತ್ತಿದ್ದಾನೆ. "**

ಈ ಆಯತ್‌ನಲ್ಲಿ ಶೇ.90 ರಷ್ಟು ಗಂಡಹೆಂಡತಿಯರು ಒಬ್ಬರನ್ನೊಬ್ಬರು ಸೇರಿಕೊಳ್ಳುವ ವಿಷಯ ಇರುವಾಗ, ಶೇ.ಹತ್ತರಷ್ಟು ರಾತ್ರಿ, ತಿನ್ನಿರಿ, ಕುಡಿಯಿರೆಂದು ಹಗಲು ಉಪವಾಸ ಇರಿ ಎಂದು ಹೇಳಿದ್ದಾರೆ. ಈ ವಿಷಯವನ್ನು ಎಲ್ಲರೂ ಪ್ರಪಂಚ ಸಂಬಂಧವಾಗಿಯೇ ನೋಡುತ್ತಿದ್ದಾರೆ. ಆದರೆ ಮುಸ್ಲಿಮ್‌ರಿಗೆ ಅರ್ಥ ವಾಗಿರುವುದು ಶೇ.ಹತ್ತರಷ್ಟು ಹೇಳಿದ 'ರಾತ್ರಿ ತಿನ್ನಿರಿ, ಹಗಲು ತಿನ್ನಬೇಡಿ' ಎಂದು ಹೇಳಿರುವುದೇ ಶೇ.ನೂರರಷ್ಟು ಅರ್ಥವಾಗಿದೆ. ಈ ಆಯತ್‌ನಲ್ಲಿ ಹೇಳಿದ ಶೇ.90 ರಷ್ಟು ಪತಿಪತ್ನಿಯರ ಸಂಬಂಧವನ್ನು ಬಿಟ್ಟು ಶೇ.ಹತ್ತರಷ್ಟು 'ರಾತ್ರಿಹೊತ್ತು ತಿನ್ನಿರಿ' ಎನ್ನುವ ವಿಷಯವನ್ನೇ ಹೇಳಿಕೊಳ್ಳುತ್ತಾ ಅದನ್ನೇ ಎಲ್ಲರೂ ಆಚರಿ ಸುತ್ತಿದ್ದಾರೆ. ನಾವು ಈ ಆಯತ್ ನೋಡಿದ ನಂತರ ಪ್ರಪಂಚ ಸಂಬಂಧವಾಗಿ ಅರ್ಥ ಮಾಡಿಕೊಂಡರೆ ಈ ವಿಷಯವನ್ನು ದೇವರು ಏಕೆ ಹೇಳಿದ್ದಾನೆ? ಈ ವಿಷಯಗಳು ಪ್ರಪಂಚ ವಿಷಯಗಳಾದಾಗ ಈ ವಿಷಯಗ ಳೊಂದಿಗೆ ದೇವರಿಗೆ ಏನು ಕೆಲಸ ಇರುತ್ತದೆ? ಎಂದು ಆಲೋಚಿಸಿದ್ದೇವೆ. ಈ ವಾಕ್ಯಕ್ಕಿಂತ ಮೊದಲು 186ನೇ ವಾಕ್ಯವನ್ನು ಹೇಳಿರುವುದರಿಂದ ಆ ವಾಕ್ಯದ ಪ್ರಕಾರ 187ನೇ ಆಯತ್ ಮನುಷ್ಯರಿಗೆ ಅರ್ಥವಾಗಲಿಲ್ಲವೆಂದು ತಿಳಿದಿದೆ. **'ಹಗಲು ಉಪವಾಸ'** ಎನ್ನುವ ವಿಷಯ ಪೂರ್ತಿ ದೈವ ಸಂಬಂಧವಾದುದೆಂದು ತಿಳಿದುಹೋಗಿದೆ. ಹಿಂದಕ್ಕೆ ಹೋಗಿ 184, 185ನೇ ವಾಕ್ಯಗಳನ್ನು ನೋಡಿದ ನಂತರ 'ಉಪವಾಸ' ಎಂದರೇ ತಿನ್ನುವ ತಿಂಡಿಗೆ ಸಂಬಂಧಿಸಿದ ವಿಷಯ ಅಲ್ಲವೆಂದು ದೈವಿಕವಾದ ಯೋಗವೆಂದು, ಹಾಗೆ ಪ್ರಪಂಚ ಧ್ಯಾಸ ಇಲ್ಲದೆಹೋಗಿ ದೈವಚಿಂತನೆಯಲ್ಲಿ ಇರುವುದು ಉಪವಾಸವಾಗುತ್ತದೆಂದು, ಅದಕ್ಕೆ ಬೇಕಾದ ಜ್ಞಾನವನ್ನು ಗುರು ಹತ್ತಿರದಿಂದ ಪಡೆಯುವುದು ಉಪದೇಶ ಎಂದು, ಉಪದೇಶವನ್ನು ಹೊಂದಿದವನು, ಉಪವಾಸ ಇರಬೇಕಾಗಿದ್ದೆಯೆಂದು ತಿಳಿದುಹೋಗಿದೆ. ಉಪದೇಶವನ್ನೇ 'ರಂಜಾನ್' ಎಂದು ಹೇಳಿದಂತೆ, ರಂಜಾನ್, ರೋಜಾ ಎನ್ನುವ ಪದಗಳು ಖುರ್‌ಆನ್ ಗ್ರಂಥಕ್ಕಿಂತ ಮೊದಲೇ ಕೃತಯುಗ ದಲ್ಲಿಯೇ ಹೇಳಲ್ಪಟ್ಟಿವೆಯೆಂದು ತಿಳಿದುಹೋಗಿದೆ. ಅದರಪ್ರಕಾರ ನಿಜವಾದ ಉಪದೇಶವನ್ನು ಹೊಂದಿದವನನ್ನು 185ನೇ ವಾಕ್ಯದಲ್ಲಿ **ರಂಜಾನ್‌ನನ್ನು**

**ಹೊಂದಿದವನು** ಎಂದು ಬರೆಯಲ್ಪಟ್ಟಿರುವುದು ನಮ್ಮ ಭಾವನೆಗೆ ಬಹಳ ಹತ್ತಿರವಾಗಿದೆ. ಆಗ 187ನೇ ವಾಕ್ಯದಲ್ಲಿ ಬರೆದ ಗಂಡಹೆಂಡತಿಯರು ಸೇರಿಕೊಳ್ಳುವುದನ್ನು ಧರ್ಮಸಮ್ಮತ ಮಾಡಲ್ಪಟ್ಟಿದೆಯೆಂದು ಹೇಳಿರುವುದನ್ನು ಕುರಿತು ಆಲೋಚಿಸಿದಾಗ ಸ್ವಲ್ಪ ವಿಷಯ ಅರ್ಥವಾಗಿದೆ. ಅದೇನೆಂದರೆ! ಅಲ್ಲಿ ಹೇಳಿರುವುದು ಪತಿಪತ್ನಿಯರ ಶರೀರ ಸಂಬಂಧವಾಗಿ ಸೇರಿಕೊಳ್ಳುವುದನ್ನು ಕುರಿತು ಅಲ್ಲ. ಪತಿಪತ್ನಿಯರು ಸೇರಿಕೊಳ್ಳುವುದಕ್ಕೆ ಅಂದರೇ ಲೈಂಗಿಕ ವಿಷಯಗಳ ಹತ್ತಿರ ಕೂಡಾ ದೈವ ಸಂಬಂಧವಾದ ಧರ್ಮ ಇರುತ್ತದಾ? ಎಂದು ಪ್ರಶ್ನೆ ಬಾರದೆ ತಪ್ಪಲ್ಲ. ಹಾಗೆ ಪ್ರಶ್ನಿಸಿಕೊಂಡು ನೋಡಿದರೆ ಆ ವಿಷಯದಲ್ಲಿ ದೇವರು ಏನು ಹೇಳಲಿಲ್ಲವೆಂದು, ಆ ಕೆಲಸಗಳೆಲ್ಲವೂ ಅವರವರ ಕರ್ಮಗಳನ್ನನುಸರಿಸಿ ಮೊದಲೇ ನಿರ್ಣಯಿಸಲ್ಪಟ್ಟಿರುತ್ತವೆಂದು ಹೇಳದೆ ತಪ್ಪುವುದಿಲ್ಲ. ಪ್ರತಿ ಚಿಕ್ಕ ಪ್ರಪಂಚ ವಿಷಯ ಮೊದಲೇ ಬರೆದಿಟ್ಟಿರುವ ಕರ್ಮಪತ್ರದ ಪ್ರಕಾರ ನಡೆದುತೀರಬೇಕಾದ್ದೇ. ಈ ವಿಷಯದಲ್ಲಿ ಧರ್ಮವೆನ್ನುವುದು ಇರುವುದಿಲ್ಲ. ಆ ವಿಷಯದ ಮೇಲೆ ದೇವರು ಎಂತಹ ಧರ್ಮನಿರ್ಣಯ ಮಾಡಲಿಲ್ಲ. ವಾಕ್ಯವನ್ನು ನಾವು ಸರಿಯಾಗಿ ಗ್ರಹಿಸಿಕೊಳ್ಳಲಿಲ್ಲ.

ಗ್ರಂಥ ಪ್ರಾರಂಭದಲ್ಲಿಯೇ ಮೂರನೆ ಸೂರಾ ಮೊದಲಿನಲ್ಲಿಯೇ ಏಳನೆ ಆಯತ್‌ನಲ್ಲಿ ಈ ಗ್ರಂಥದಲ್ಲಿ **ಮುತಷಾಬಿಹಾತ್** ವಾಕ್ಯಗಳಿವೆಯೆಂದು ಗ್ರಂಥವನ್ನು ಬೋಧಿಸಿದ ಜಿಬ್ರಯೇಲ್‌ರವರೇ ಹೇಳುವುದಾಗಿದೆ. ಜ್ಞಾನವನ್ನು ವಾಖ್ಯರೂಪದಲ್ಲಿ ಬೋಧಿಸಿದಾಗ ಅದು ಗ್ರಂಥರೂಪವಾಗಿ ಪ್ರಜೆಗಳೊಳಗೆ ಹೋದಾಗ ಅದನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೆಹೋದರೆ ಮಾಡಿದ ಕೆಲಸ ವ್ಯರ್ಥವಾಗುತ್ತದೆಂದು ಜಿಬ್ರಯೇಲ್ ಮೊದಲೇ ತಾನು ಹೇಳಿದ ವಾಕ್ಯಗಳಲ್ಲಿ ಮುತಷಾಬಿಹಾತ್ (ಸೂಕ್ಷ್ಮ ಅರ್ಥಗಳಿರುವ) ವಾಕ್ಯಗಳಿವೆಯೆಂದು ಹೇಳುವುದಾಗಿದೆ. ಜಿಬ್ರಯೇಲ್ ಮೊದಲೇ ಹೇಳಿದರೂ, ಬಹಳಜನ ಮುಸ್ಲಿಮ್‌ರು ಮುತಷಾಬಿಹಾತ್ ವಾಕ್ಯಗಳು ಇದ್ದಂತಾಗಲಿ, ಅವುಗಳಿಗೆ ಸೂಕ್ಷ್ಮವಾದ ಅರ್ಥವಿದೆ ಎಂದಾಗಲಿ, ಹೊರಗೆ ಹೇಳಿಕೊಳ್ಳುತ್ತಿಲ್ಲ. ಯಾರಾದರೂ ಸೂಕ್ಷ್ಮವಾಗಿ ವಿವರ

ಹೇಳುವವನಿದ್ದರೆ 'ಇವು ಮನುಷ್ಯರು ಹೇಳುವ ವಿಷಯಗಳು ಅಲ್ಲ ಇದರ ಅರ್ಥ ದೇವರಿಗೇ ತಿಳಿದಿದೆ' ಎಂದು ಅವನನ್ನು ಹೇಳನ ಮಾಡುತ್ತಿದ್ದಾರೆ. ಮನುಷ್ಯರು ಸ್ವತಃವಾಗಿ ಹೇಳುವುದಿಲ್ಲ ಎಂದು ನಾನು ಕೂಡಾ ಒಪ್ಪಿಕೊಳ್ಳುತ್ತಿದ್ದೇನೆ. ಆದರೇ ಮನುಷ್ಯನಲ್ಲಿರುವ ದೇವರು ಹೇಳಬಹುದು ಅಲ್ಲವೆ! ಎಂದು ಯಾರೂ ಅಂದುಕೊಳ್ಳುತ್ತಿಲ್ಲ. ಈ ವಿಧವಾಗಿ ಮುತಷಾಬಿಹಾತ್ ವಾಕ್ಯಗಳ ವಿವರ ಮನುಷ್ಯರು ತಿಳಿಯಲಾರದೆ ಹೋಗಿದ್ದಾರೆ.

ದೇವರು ಮುತಷಾಬಿಹಾತ್ ವಾಕ್ಯಗಳನ್ನು ಹೇಳದಂತೆ ಸ್ಥೂಲವಾದ ಮುಹ್ಕಮಾತ್ ವಾಕ್ಯಗಳೇ ಹೇಳಿದ್ದರೆ ಚೆನ್ನಾಗಿರುತ್ತಿತ್ತು ಅಲ್ಲವೆ! ಎಂದು ಕೆಲವರು ಕೇಳಬಹುದು. ಅದಕ್ಕೆ ನನ್ನ ಸಮಾಧಾನ ಏನೆಂದರೆ! ದೇವರು ಎಲ್ಲಾ ತಿಳಿದವನು. ಆತನು ಮನುಷ್ಯರು ಓದುವ ವಾಕ್ಯ ಮನುಷ್ಯರಿಗೆ ಸುಲಭವಾಗಿ ಅರ್ಥ ಆಗಬಾರದೆಂದೇ ಅಂತಹ ಸೂಕ್ಷ್ಮ ಅರ್ಥವಿರುವ ವಾಕ್ಯಗಳನ್ನು ಇಟ್ಟಿದ್ದಾನೆ. ಅಂತಹ ವಾಕ್ಯಗಳನ್ನು ತಿಳಿಯಬೇಕೆಂದು ಯಾರು ತಾಪತ್ರಯ ಪಡುತ್ತಾನೊ, ಅವನಿಗೆ 2–186 ವಾಕ್ಯದಲ್ಲಿ ಹೇಳಿದಂತೆ ತಾನೇ ಅವನ ಶರೀರದೊಳಗಿಂದಲೇ ತಿಳಿಸುತ್ತೇನೆ. ಕಷ್ಟವಾದ ವಾಕ್ಯಗಳು ದೇವರ ಮೇಲೆ ನಂಬಿಕೆ ಇಲ್ಲದವರಿಗೆ ಅರ್ಥ ಆಗಬಾರದೆನ್ನುವ ಉದ್ದೇಶದಿಂದಲೇ ದೇವರು ಇಟ್ಟಿರುವುದು ನಡೆದಿದೆ. ಈದಿನ ಎಷ್ಟೋ ಮುಸ್ಲಿಮ್ ಸಮಾಜ ಭೂಮಿಮೇಲೆ ಇದೆ. ಕೆಲವು ಕೋಟಿ ಸಂಖ್ಯೆಗಳಲ್ಲಿ ಮುಸ್ಲಿಮ್‌ರು ಇರುವಾಗ, ಅದರಲ್ಲಿ ಲಕ್ಷಗಳು, ಸಾವಿರಾರು, ನೂರಾರು, ಹತ್ತರ ಸಂಖ್ಯೆಯಲ್ಲಿ ಕೂಡಾ ಕೆಲವು ವಿಷಯಗಳು ಸಕ್ರಮವಾಗಿ ಅರ್ಥ ವಾದವರಿದ್ದಾರೆಂದು ಹೇಳಲಾರೆವು. ಮುಸ್ಲಿಮ್‌ರಲ್ಲಿ ಒಂದು ಕ್ರಮಶಿಕ್ಷಣೆ ಇದೆ. ಯಾವ ಇತರೆ ಮತಗಳಲ್ಲಿ ಇಲ್ಲದ ಕ್ರಮಶಿಕ್ಷಣ ಮುಸ್ಲಿಮ್‌ರಲ್ಲಿ ಇರುವುದನ್ನು ದೊಡ್ಡದಾಗಿ ಹೇಳಿಕೊಳ್ಳಬಹುದು. ಅಂತಹ ದೊಡ್ಡತನ ಉಳಿದ ಮತಗಳಲ್ಲಿ ಇಲ್ಲವೆಂದೇ ಹೇಳಬಹುದು. ಆದರೇ ಅವರ ಹಿರಿಯರು ಹೇಗೆ ಹೇಳಿದರೆ ಹಾಗೆ ಕೇಳುವುದು ಕ್ರಮಶಿಕ್ಷಣವೇ ಆದರೇ ಅದು ಪ್ರಪಂಚ ವಿಷಯಗಳಲ್ಲಿ ದೊಡ್ಡದಾಗಿಯೇ ಕಾಣಿಸುತ್ತಿರುತ್ತದೆ. ಕಾಣಿಸುವ ವಿಧವಾಗಿ ಹಿರಿಯರ ಮಾತಿನ

ಪ್ರಕಾರ ನಡೆದುಕೊಳ್ಳುವುದು ದೊಡ್ಡ ಕೆಲಸವಾಗುತ್ತದೆ. ಅದೇ ಪರಮಾತ್ಮ (ದೇವರ) ವಿಷಯದೊಳಗೆ ಬರುವಷ್ಟರಲ್ಲಿ (6–91) ಆಯತ್‌ನಲ್ಲಿ **"ನಾನು ಹೇಳಿದ ಜ್ಞಾನ ನಿಮಗಾಗಲಿ, ನಿಮ್ಮ ಹಿರಿಯರಿಗಾಗಲಿ ತಿಳಿದಿಲ್ಲ"** ಎಂದು ದೇವರೇ ಹೇಳಿರುವುದರಿಂದ ದೇವರ ಜ್ಞಾನ ಅವರ ಹಿರಿಯರಿಗೆ ಕೂಡಾ ತಿಳಿದಿಲ್ಲವೆಂದೇ ಹೇಳಬಹುದು. ಆದ್ದರಿಂದ ದೇವರ ಜ್ಞಾನ ವಿಷಯದಲ್ಲಿ 'ಹಿರಿಯರು ಹೇಳಿದಂತೆ ಕೇಳುತ್ತೇವೆ' ಎನ್ನುವ ಕ್ರಮಶಿಕ್ಷಣವೇ ನಷ್ಟವನ್ನು ಕೈಗೂಡಿಸಿದೆ. ಪ್ರಪಂಚ ವಿಷಯದಲ್ಲಿ ಹೇಳಲಾದ ಕ್ರಮಶಿಕ್ಷಣ ಜ್ಞಾನ ವಿಷಯದಲ್ಲಿ ಜ್ಞಾನವನ್ನು ತಿಳಿಯದಂತೆ ಮಾಡಿದೆ. ಹಿರಿಯರು ಹೇಳಿದಂತೆ ಕೇಳುವುದರಿಂದ ಅವರು ಹೇಳಿದ ಕೆಲವು ತಪ್ಪು ಭಾವನೆಗಳು ಎಲ್ಲರಿಗೂ ಹರಡಿಹೋಗಿವೆ. ಉಪವಾಸ ವಿಷಯದಲ್ಲಿ ಅದೇ ನಡೆದಿದೆ. ಹಾಗೇ 'ಪತಿಪತ್ನಿಯ ಸೇರುವಿಕೆ' ವಿಷಯದಲ್ಲಿ ಅದೇ ನಡೆದಿದೆ.

ಸೂರಾ ಎರಡು 184, 185 ಆಯತ್‌ಗಳಲ್ಲಿ ಹೇಳಿದ, ಹೇಳಲ್ಪಟ್ಟ **'ಉಪದೇಶ'** ಏನೋ ಅಲ್ಲಿರುವ **'ಉಪವಾಸ'** ಏನೋ ತಿಳಿಯದೇ ಹೋಗಿದೆ. ಅದೇ ವಿಧವಾಗಿ 187ನೇ ಆಯತ್‌ನಲ್ಲಿ ಶೇ.90 ರಷ್ಟು ಪತಿಪತ್ನಿಯರ ಸೇರುವಿಕೆ ವಿಷಯ ಹೇಳಿದರೇ ಅದು ದಂಪತಿಗಳ ಶಾರೀರಕವಾಗಿ ಸೇರುವುದರ ಕೆಳಕ್ಕೆ ಹೋಲಿಸಿಕೊಂಡಿದ್ದಾರೆ. ಹಾಗೆ ಅಂದುಕೊಳ್ಳುವ ಮುನ್ನ ಈ ವಿಷಯದಲ್ಲಿ ದೇವರಿಗೆ ಸಂಬಂಧ ಇಲ್ಲವಲ್ಲ! ದೇವರು ಹೇಳುವುದು ಜ್ಞಾನ ವಿಷಯ ಅಲ್ಲವೆ! ಕರ್ಮಕ್ಕೆ ಸಂಬಂಧಿಸಿದ ಪ್ರಪಂಚ ವಿಷಯ ಏಕೆ ಹೇಳುತ್ತಾನೆ? ಎಂದು ಸ್ವಲ್ಪವಾದರೂ ಆಲೋಚಿಸದೆ ಹೋಗಿದ್ದಾರೆ. ಮನುಷ್ಯನಿಗೆ ಐದು ಜ್ಞಾನೇಂದ್ರಿಯ ಗಳ ಮೂಲಕ ಕಷ್ಟಗಳು ಸುಖಗಳು ಶರೀರದಲ್ಲಿನ ಜೀವಿಗೆ ಸೇರುತ್ತಿರುತ್ತವೆ. ಆಹಾರ ವಿಷಯಕ್ಕೆ ಬಂದರೆ ಅವನು ಮಾಡಿಕೊಂಡ ಕರ್ಮವನ್ನು ಅನುಸರಿಸಿ ಅವನಿಗೆ ಯಾವ ಆಹಾರ ದೊರೆಯಬೇಕೊ ಅದು ನಿರ್ಣಯ ಮೊದಲೇ ನಡೆದುಹೋಗಿರುತ್ತದೆ. ಯಾವುದನ್ನು ಯಾವಾಗ ತಿನ್ನಬೇಕೆಂದು ಬರೆದಿಟ್ಟಿದ್ದರೆ ಅದು ಆಗಲೇ ಲಭಿಸುತ್ತದೆ. ಸುಖ ದುಃಖಗಳನ್ನು ಐದು ಜ್ಞಾನೇಂದ್ರಿಯಗಳ

ಮೂಲಕ ಮನುಷ್ಯ ಅನುಭವಿಸುವುದು ನಡೆಯುತ್ತಿರುವ ಸತ್ಯ. ನಾಲಿಗೆ ಮೂಲಕ ರುಚಿ ಎನ್ನುವ ಸುಖವನ್ನು ಅನುಭವಿಸ ಬೇಕಾಗಿರುತ್ತದೆ. ಮನುಷ್ಯ ಯಾವ ಮತಸ್ಥನಾದರೂ ಅದು ಮೇಲಿನ ವಿಷಯವೇ ಹೊರತು ಒಳಗೆ ಮಾತ್ರ ಎಲ್ಲರಿಗೂ ಎಲ್ಲಾ ಮತದವರಿಗು ಒಂದೇ ವಿಧಾನವಿದೆ. ಒಂದೇ ನಾಲಿಗೆ ಮೂಲಕ ಮನುಷ್ಯ ರುಚಿ ಎನ್ನುವ ಸುಖವನ್ನೋ ಕಷ್ಟವನ್ನೋ ಅನುಭವಿ ಸಬೇಕಾಗಿರುತ್ತದೆ. ಮನುಷ್ಯನ ಆಹಾರ ನಾಲಿಗೆಗೆ ಸಂಬಂಧಿಸಿರುವುದು. ಅಂದರೇ ಶರೀರ ಇಂದ್ರಿಯ ಸಂಬಂಧವಾದುದು. ಹಾಗೆಯೇ ಪತಿಪತ್ನಿ ಶರೀರ ಸೇರುವುದಕ್ಕೆ ಸಂಬಂಧಿಸಿದ ವಿಷಯ, ಐದು ಜ್ಞಾನೇಂದ್ರಿಯಗಳಲ್ಲಿ ಚರ್ಮಕ್ಕೆ ಸಂಬಂಧಿಸಿರು ವುದು. ಇಲ್ಲಿ ಮುಸ್ಲಿಮ್‌ಗೆಂದು, ಹಿಂದೂವಿಗೆಂದು ಕ್ರೈಸ್ತರಿಗೆಂದು ಬೇರೆಬೇರೆ ವಿಧಾನ ಇರುವುದಿಲ್ಲ. ಶರೀರವಿರುವ ಅವರೆಲ್ಲರಿಗೂ ಒಂದೇ ವಿಧಾನವಿರುತ್ತದೆ. ಶರೀರದಲ್ಲಿ ಐದು ಜ್ಞಾನೇಂದ್ರಿಯಗಳು ಕ್ರಮವಾಗಿ ಹೀಗೆ ಇವೆ. 1) ಕಣ್ಣು, 2) ಮೂಗು, 3) ನಾಲಿಗೆ, 4) ಕಿವಿ, 5) ಚರ್ಮ. ಈ ಐದು ಪ್ರಪಂಚ ಸುಖ ದುಃಖಗಳಿಗೆ ದ್ವಾರಗಳಿದ್ದಂತೆ. ಇವುಗಳಿಂದಲೇ ಶರೀರದಲ್ಲಿನ ಜೀವಿಗೆ ಕಷ್ಟಸುಖಗಳು ಸೇರುತ್ತಿರುತ್ತವೆ. ಆಹಾರ ಸುಖ **ನಾಲಿಗೆ** ಮುಖಾಂತರ ಒಳಗಿನ ಜೀವಿಗೆ ಸೇರಿದಾಗ, ಪತಿಪತ್ನಿಯರ ಸೇರುವಿಕೆ ಸುಖ **ಚರ್ಮ** ಎನ್ನುವ ಜ್ಞಾನೇಂದ್ರಿಯ ಮುಖಾಂತರ ಸೇರುತ್ತದೆ. ಈ ಐದು ಅವಯವ ಸುಖದುಃಖಗಳು ಮನುಷ್ಯ ಮಾಡಿಕೊಂಡ ಕರ್ಮವನ್ನನುಸರಿಸಿ ಇರುತ್ತದೆ. ಈ ವಿಷಯಗಳನ್ನು ದೇವರು ಮನುಷ್ಯನನ್ನು ಜನ್ಮಕ್ಕೆ ಕಳಿಸಿದಾಗಲೇ ತನ್ನ ತೀರ್ಪಿನಲ್ಲಿ ಕರ್ಮಪತ್ರವಾಗಿ ಬರೆದು ಕಳಿಸಿರುತ್ತಾನೆ. ಕರ್ಮಪತ್ರದಲ್ಲಿ ಮೊದಲೇ ಬರೆದ ಅದರ ಪ್ರಕಾರವೇ ಆಹಾರವಾಲಿ, ಗಂಡಹೆಂಡತಿ ಇರುವುದಾಗಲಿ ನಡೆಯುತ್ತಿರುತ್ತದೆ. ಮಧ್ಯದಲ್ಲಿ ದೇವರು ಇವುಗಳ ಜೋಕ್ಯ ಮಾಡಿಕೊಳ್ಳುವುದಿಲ್ಲ. ಜೀವಿಯ ಕರ್ಮವನ್ನನುಸರಿಸಿ ಆತ್ಮ ಅವನನ್ನು ನಡೆಸುತ್ತಿರುವಾಗ, ಅಲ್ಲಾಹ್ (ದೇವರು) ಸಾಕ್ಷಿಯಾಗಿ ನೋಡುತ್ತಿರುತ್ತಾನೆ. ಇದೇ ವಿಷಯವೇ ಸೂರಾ 50, ಆಯತ್ 21 (50–21) ರಲ್ಲಿ ಹೇಳುವುದಾಗಿದೆ. ಅಲ್ಲಿ ಹೇಳಿದ ವಾಕ್ಯವನ್ನು ಮನುಷ್ಯರು ಮರೆಯಬಾರದು.

ಸುಖದುಃಖಗಳಿಗೆ ಅತೀತವಾದುದು ನಿದ್ರೆ. ದೇವರು ಮನುಷ್ಯನಿಗೆ ಕಷ್ಟ ಸುಖಗಳನ್ನು ಕರ್ಮಬದ್ಧ ಮಾಡಿದ್ದಾನಾದರೆ ನಿದ್ರೆಯನ್ನು ಕರ್ಮಕ್ಕೆ ಅತೀತ ಮಾಡಿದ್ದಾನೆ. ಆದ್ದರಿಂದ ನಿದ್ರೆಯಲ್ಲಿ ಸುಖ ಇರುವುದಿಲ್ಲ, ಕಷ್ಟ ಇರುವುದಿಲ್ಲ. ಸುಖದುಃಖ ಕರ್ಮಗಳು ಜಾರಿ ಆಗದಿರುವಾಗ ಮನುಷ್ಯ ನಿದ್ರೆಯೊಳಗೆ ಹೋಗುತ್ತಾನೆ. ಮನುಷ್ಯ ಹಗಲು ಎಚ್ಚರಗೊಂಡು ಕರ್ಮಗಳು ಆಚರಿಸುವಂತೆ, ರಾತ್ರಿಸಮಯ ಕರ್ಮಕ್ಕೆ ಅತೀತವಾಗಿ ನಿದ್ರೆಹೋಗವಂತೆ ದೇವರು ನಿರ್ಣಯಿಸಿದ್ದಾನೆ. ನಿದ್ರೆಯಲ್ಲಿ ಶರೀರ ಎನ್ನುವ ಪ್ರಕೃತಿ (ಸ್ತ್ರೀ), ಪುರುಷನು ಎನ್ನುವ ಆತ್ಮ ಎರಡು ಏಕವಾಗಿಹೋಗುತ್ತವೆ. ಆಗ ಪುರುಷನಾಗಿರುವ ಆತ್ಮವಾಗಲಿ, ಪ್ರಕೃತಿ (ಸ್ತ್ರೀ) ಆಗಿರುವ ಶರೀರವಾಗಲಿ ಬೇರೆಬೇರೆಯಾಗಿ ಇಲ್ಲದೆ ಒಂದಾಗಿರುತ್ತದೆ. ಅದನ್ನೇ 'ಸ್ತ್ರೀ ಪುರುಷರ ಸೇರುವಿಕೆ' ಎಂದು ಹೇಳುತ್ತಾರೆ. ಶರೀರದಲ್ಲಿ ನಿವಾಸಿಸುವ ಆತ್ಮ ಶರೀರದೊಂದಿಗೆ ಬೆರೆತು ಹೋದಾಗ ನಿದ್ರೆಯಾಗುತ್ತದೆ. ಹಾಗೇ ಶರೀರವೇ ಆತ್ಮನಲ್ಲಿ ಬೆರೆತಾಗ ಕೂಡಾ ನಿದ್ರೆಯಾಗುತ್ತದೆ. ಆದ್ದರಿಂದ ಆತ್ಮ ಶರೀರವನ್ನು ಸೇರಬಹುದು ಶರೀರ ಆತ್ಮವನ್ನು ಸೇರಬಹುದು. ಇಲ್ಲಿ ನಿಮಗೆ ಅರ್ಥವಾಗುವುದಕ್ಕೆ ಶರೀರವನ್ನು ಪ್ರಕೃತಿಯೆಂದು, ಆತ್ಮವನ್ನು ಪುರುಷನೆಂದು ಹೇಳುವುದಾಗಿದೆ. ಭಗವದ್ಗೀತೆ ಗ್ರಂಥದಲ್ಲಿ ಪ್ರಕೃತಿಯಿಂದ ತಯಾರಾದ ಶರೀರವನ್ನು ಸ್ತ್ರೀ ಅಂಶವೆಂದು, ಆತ್ಮವನ್ನು, ಜೀವಾತ್ಮವನ್ನು, ಪರಮಾತ್ಮವನ್ನು ಮೂವರು ಪುರುಷರೆಂದು ಹೇಳುವುದಾಗಿದೆ. ಆತ್ಮ ಪುರುಷನೆಂದು ಹೇಳುತ್ತಾ ಆತ್ಮ, ಶರೀರ ಬೆರೆತಾಗ ನಿದ್ರೆಯಾಗುತ್ತದೆ. ಆಗ ಶರೀರದಲ್ಲಿ ಸುಖ ದುಃಖಗಳನ್ನು ಜೀವಿಯು ಅನುಭವಿಸುವುದು ಇಲ್ಲ.

ಸೂರಾ ಎರಡು ಆಯತ್ 187ರಲ್ಲಿ ಪ್ರಕೃತಿ ಆತ್ಮನಲ್ಲಿ ಸೇರಬಹುದು. ಆತ್ಮ ಪ್ರಕೃತಿಯಲ್ಲಿ ಸೇರಬಹುದು ಎನ್ನುವ ವಿಷಯವನ್ನು 'ನಿಮಗೆ ನಿಮ್ಮ ಪತ್ನಿಯರು ವಸ್ತ್ರಗಳು, ನಿಮ್ಮ ಪತ್ನಿಯರಿಗೆ ನೀವು ವಸ್ತ್ರಗಳು' ಎಂದು ಹೇಳಿದ್ದಾರೆ. (ತೆಲುಗಿನಲ್ಲಿ ಭಾರ್ಯ ಎಂದರೆ ಭರಿಸಲ್ಪಡುವವಳು ಪ್ರಕೃತಿಯೆಂದು, ಭರ್ತ ಎಂದರೆ ಭರಿಸುವವನು ಆತ್ಮಯೆಂದು ತಿಳಿಯಬೇಕು.) ಇದರ ಭಾವನೆ ಹೆಂಡತಿ

ಎಂದರೆ ನಿಭಾಯಿಸಲ್ಪಡುವವಳು ಪ್ರಕೃತಿಯೆಂದು, ಗಂಡ ಎಂದರೆ ನಿಭಾಯಿಸುವವನು ಆತ್ಮಯೆಂದು ತಿಳಿಯಬೇಕು. ನಿದ್ರೆಯನ್ನು ಗಂಡಹೆಂಡಿರ ಸೇರುವಿಕೆಯಾಗಿ ನೋಡಬೇಕು. ಮನುಷ್ಯ ರಾತ್ರಿ ಮಲಗಿ ನಿದ್ರೆಹೋಗುವುದಕ್ಕೆ ಶರೀರದಲ್ಲಿ ದೇವರು ನಿರ್ಣಯಿಸಿದ್ದಾನೆ. ಅದನ್ನೇ 'ಧರ್ಮಸಮ್ಮತ ಮಾಡಲ್ಪಟ್ಟಿದೆ' ಎಂದು ಹೇಳಿದ್ದಾನೆ. ರಾತ್ರಿ ಸಮಯ ನಿದ್ರೆ ಹೋಗುವುದು ಧರ್ಮಸಮ್ಮತ. ಆದ್ದರಿಂದ ರಾತ್ರಿಸಮಯ ನಿದ್ರೆ ಹೋಗುವುದರಿಂದ ಪಾಪಬರುವುದಿಲ್ಲ. ಹಗಲುಹೊತ್ತು ನಿದ್ರೆ ಅಧರ್ಮ. ಹಗಲು ನಿದ್ರೆ ಧರ್ಮಸಮ್ಮತವಲ್ಲದ್ದು. ಹಗಲು ನಿದ್ರೆ ಹೋಗುವವರನ್ನು 'ನೀವು ರಹಸ್ಯವಾಗಿ ಆತ್ಮದ್ರೋಹಕ್ಕೆ ಭಾಗಿಯಾಗುತ್ತಿದ್ದೀ ರೆಂದು' ಹೇಳಿದ್ದಾನೆ. ಆದ್ದರಿಂದ ರಾತ್ರಿ ಸಮಯ ನಿದ್ರೆಹೋಗುವುದು ಧರ್ಮಸಮ್ಮತ ಮಾಡಲ್ಪಟ್ಟಿದೆ. ಆದರೇ ನಸುಕಿನ ಜಾವದಲ್ಲಿ ಬಿಳುಪು ಕತ್ತಲೆಯಿಂದ ಕಾಣಿಸುವವರೆಗು ಎಂದರೆ, **ನಾಲ್ಕರಿಂದ ಆರುಗಂಟೆಗಳ ವರೆಗು** ಎರಡು ಗಂಟೆಗಳು ನಿಮಗೋಸ್ಕರ ದೇವರು ತಿಳಿಸಿದ ಜ್ಞಾನವನ್ನು, ಬರೆದಿಟ್ಟಿರುವ ದೈವಗ್ರಂಥಗಳಲ್ಲಿ ಅನ್ವೇಷಿಸುವುದಕ್ಕೆ ಅನುಮತಿಯಿದೆ ಎಂದು ಹೇಳಿದ್ದಾನೆ. ಬೆಳಗಿನಜಾವ ಎರಡು ಗಂಟೆಗಳಕಾಲ ದೇವರ ಜ್ಞಾನವನ್ನು ಗ್ರಂಥಗಳಲ್ಲಿ ಹುಡುಕಿ ತಿಳಿದುಕೊಳ್ಳುವುದಕ್ಕೆ ದೇವರು ಅನುಮತಿ ಕೊಟ್ಟಿದ್ದಾನೆ. ಆದ್ದರಿಂದ ಆ ಸಮಯದಲ್ಲಿ ಎಚ್ಚರವಾಗಿರುವುದು ಧರ್ಮಸಮ್ಮತ. ಉಳಿದ ರಾತ್ರಿ ಎಚ್ಚರವಾಗಿರುವುದು ಹಗಲು ಮಾಡಬೇಕಾದ ಕೆಲಸಗಳು ರಾತ್ರಿ ಮಾಡುವುದು ಅಧರ್ಮವಾಗುತ್ತದೆ. 'ಮುಂಜಾನೆ ಶ್ವೇತ ಛಾಯೆಗಳು ಕಾಣಿಸುವರೆಗು ತಿನ್ನಿರಿ, ಕುಡಿಯಿರಿ' ಎಂದು ಇದೆ ಅಲ್ಲವೆ! ಎಂದು ಕೆಲವರು ಕೇಳಬಹುದು. ಅದಕ್ಕೆ ನನ್ನ ಉತ್ತರ ಹೀಗೆ ಇದೆ. ನಿಮ್ಮಗಾಗಿ ಬರೆದಿಟ್ಟಿರುವುದನ್ನು ಅನ್ವೇಷಿಸಿರಿ ಎಂದು ಹೇಳಿ, ಆ ಕೆಲಸ ಮಾಡಬೇಕಾಗಿರುವುದು ಬೆಳಗಿನ ಜಾವದಲ್ಲಿ ಎಂದು ಹೇಳಿ, ಆಗ ನಿಮಗೆ ಓದು ಬಂದರೆ ಓದಿರಿ. ಓದು ಬರದಿದ್ದರೆ ಇತರರ ಮೂಲಕ ಕೇಳಿರಿ ಎಂದು ಹೇಳಿದ್ದಾನೆ. **'ಓದಿರಿ, ಕೇಳಿರಿ'** ಎಂದು ಹೇಳುವ ಮಾತನ್ನು ಮರೆಯಲ್ಲಿ ತಿನ್ನಿರಿ, ಕುಡಿಯಿರೆಂದು ಹೇಳಿದ್ದಾರೆ. ದೈವ ಜ್ಞಾನವೆಲ್ಲ ಹಾಗೆಯೇ ಹೇಳಲ್ಪಡುತ್ತಾ ಇರುತ್ತದೆ. ಅದನ್ನು **ಬುದ್ಧಿ ಶ್ರದ್ಧೆ** ಹೊಂದಿರುವವನು ತಿಳಿಯುತ್ತಾನೆಂದು (3–7) ರಲ್ಲಿ ಹೇಳುವುದಾಗಿದೆ.

ಬೆಳ್ಳಗಾದನಂತರ ಕೇಳುವುದು, ಓದುವುದು ಬಿಟ್ಟು ಅದನ್ನು ಆಚರಿಸುತ್ತಾ ಯೋಗವನ್ನು (ಉಪವಾಸವನ್ನು) ಮಾಡಬೇಕು. ಯೋಗ (ಉಪವಾಸ) ಎಂದರೆ ಜೀವಾತ್ಮ, ಆತ್ಮದೊಂದಿಗೆ ಸೇರಿ ನಿವಾಸಿಸುವುದು ಎಂದು ಅರ್ಥ. ಆತ್ಮ, ಜೀವಾತ್ಮ ಕೂಡಿರುವುದನ್ನು 'ಯೋಗ' ಎಂದು ಕರೆಯುತ್ತೇವೆ. ಅದನ್ನೇ ವಾಕ್ಯದಲ್ಲಿ ಉಪವಾಸ ಎಂದು ಹೇಳಿದ್ದಾರೆ. **ಹಗಲು ಯೋಗ, ರಾತ್ರಿ ನಿದ್ರೆ, ಬೆಳಗಿನಜಾವ ಜ್ಞಾನ** ತಿಳಿಯುವುದು ಮನುಷ್ಯನಿಗೆ ಧರ್ಮಸಮ್ಮತ ಮಾಡುವುದೆಂದು ಈ ವಾಕ್ಯದಲ್ಲಿ ತಿಳಿದಿದೆ. ದೇವರು ಹೇಳಿದ ವಿಷಯವನ್ನು ಸೂಕ್ಷ್ಮವಾಗಿಯೇ ಯೋಚಿಸಬೇಕು ಆದರೆ, ಸ್ಥೂಲವಾಗಿ ಯೋಚಿಸಿದರೆ ಅಲ್ಲಿ ಹೇಳಿದ ಜ್ಞಾನ ರಹಸ್ಯ ತಿಳಿಯದೇ ಹೋಗುತ್ತದೆ.

ಈ ವಿಧವಾಗಿ ನೋಡಿದರೆ ಸೂಕ್ಷ್ಮವಾಕ್ಯಗಳು ತಿಳಿಯುವುದೇ ಅಲ್ಲದೆ ಅವುಗಳಲ್ಲಿನ ಬೋಧನೆಗಳು ರಹಸ್ಯವಾಗಿ ಇರುತ್ತವೆಯೆಂದು ತಿಳಿಯುತ್ತಿದೆ. ಕೆಲವು ಸ್ಥೂಲ ವಾಕ್ಯಗಳು ಕೂಡಾ ಇವೆ. ಸ್ಥೂಲವಾಕ್ಯವನ್ನು ತೆಗೆದುಕೊಂಡು ನೋಡಿದರೆ ಅದರಲ್ಲಿ ರಹಸ್ಯ ಒಳಗೊಂಡಿರದೆ ಹೋದರೂ ಅದು ಪ್ರಪಂಚ ಸಂಬಂಧವಾದುದಾ ಅಥವಾ ಪರಮಾತ್ಮ ಸಂಬಂಧವಾದುದಾ ಎಂದು ತಿಳಿಯಲಾಗುತ್ತದೆ. ಪರಮಾತ್ಮ ಸಂಬಂಧವಾದುದಾದರೆ ಸ್ಥೂಲವನ್ನಾದರೂ ಗ್ರಹಿಸಿ ತಿಳಿದುಕೊಳ್ಳಬಹುದು. ಅದೇ ಪ್ರಪಂಚ ಸಂಬಂಧವಾದುದಾದರೆ ಅದು ಜ್ಞಾನ ಬೋಧನೆಗೆ ಸಂಬಂಧಿಸಿರುವುದು ಅಲ್ಲವೆಂದು ಹೇಳಬಹುದು. ಹಾಗಿರುವಾಗ ಅದು ಪ್ರಪಂಚ ಸಂಬಂಧವಾದುದೆಂದು ತಿಳಿದು ಅದನ್ನು ಮಾನವನು ಕಲ್ಪಿಸಿ ಗ್ರಂಥದಲ್ಲಿ ಸೇರಿಸಿದ ವಾಕ್ಯವೆಂದು ಗುರುತಿಸಬಹುದು. ಅಂತಹ ವಾಕ್ಯಗಳು ಎಷ್ಟು ಇದ್ದರೂ ಅವುಗಳನ್ನು ಯಾರಿಷ್ಟಕ್ಕವರು ಬಿಟ್ಟುಹಾಕುವುದು ಒಳ್ಳೆಯದು. ಅದನ್ನು ಕುರಿತು ಇತರರೊಂದಿಗೆ ಹೌದು ಅಲ್ಲ ಎಂದು ಚರ್ಚಿಸಬೇಕಾದ ಅಗತ್ಯವಿಲ್ಲ. ನಿನಗೆ ಇದು ಪ್ರಪಂಚ ವಿಷಯವೆಂದು ತಿಳಿದು ದೈವಗ್ರಂಥದಲ್ಲಿ ಪ್ರಪಂಚ ವಿಷಯಗಳಿಗೆ ಜಾಗ ಇಲ್ಲವೆಂದು ತಿಳಿದರೂ ಆ ವಿಷಯವನ್ನು ಇತರರು ಒಪ್ಪಿಕೊಳ್ಳುವುದಿಲ್ಲ. ಅವರು ಅದನ್ನು ದೇವರ

ಗ್ರಂಥದಲ್ಲಿನ ವಾಕ್ಯವಾಗಿಯೇ ಲೆಕ್ಕಿಸುತ್ತಿರುತ್ತಾರೆ. ಆದ್ದರಿಂದ ಅವರು ವಾದಿಸುವ ಅವಕಾಶವಿದೆ. ಹಾಗಿರುವಾಗ ವಾದನೆಗಳಿಗೆ ಅವಕಾಶ ಕೊಡದಂತೆ ನಿನಗೆ ತಿಳಿದಮಟ್ಟಿಗೆ ನೀನು ತಿಳಿದುಕೊಂಡು ಪ್ರಪಂಚ ವಾಕ್ಯಗಳಿಗೆ ದೂರವಾಗಿ, ದೇವರ ವಾಕ್ಯಗಳಿಗೆ ಹತ್ತಿರವಾಗಿ ಇರುವುದು ಒಳ್ಳೆಯದು.

ಪ್ರಪಂಚ ವಿಷಯವಾದರೂ ದೇವರ ವಾಕ್ಯವಾಗಿ ಗ್ರಂಥದಲ್ಲಿ ಬೆರೆತುಹೋದ ಒಂದು ವಾಕ್ಯವನ್ನು ಈಗ ನೋಡೋಣ. ಇದಕ್ಕುಮುನ್ನ ಐದನೆ ಸೂರಾದಲ್ಲಿ ಮೂರನೆ ಆಯತ್‌ನನ್ನು ಕುರಿತು ಹೇಳಿಕೊಂಡಿದ್ದೇವೆ. ಅದರಲ್ಲಿ ಸ್ಥೂಲವಾಗಿರುವ ವಿಷಯ ಹೊರತು ಸೂಕ್ಷ್ಮವಾಗಿ ಏನುಯಿಲ್ಲ. ಸ್ಥೂಲವಾಗಿ ಮನುಷ್ಯರು ತಿನ್ನುವ ಆಹಾರವನ್ನು ಕುರಿತು ಅಲ್ಲಿ ಹೇಳಿದ್ದಾರೆ. ಕೆಲವು ಆಹಾರಗಳನ್ನು ತಿನ್ನಿರೆಂದು, ಕೆಲವು ಆಹಾರಗಳನ್ನು ತಿನ್ನಬಾರದೆಂದು ನಿಷೇಧವನ್ನು ವಿಧಿಸಿದ್ದಾರೆ. ರಕ್ತ, ಹಂದಿಮಾಂಸ, ಸತ್ತುಹೋದ ಪ್ರಾಣಿಗಳು, ಇತರೆ ದೇವತೆಗಳಿಗೆ ಬಲಿ ಕೊಟ್ಟಿರುವವು, ಕ್ರೂರ ಮೃಗಗಳಿಂದ ಸಾಯಿಸಲ್ಪಟ್ಟ ಪ್ರಾಣಿಗಳನ್ನು ತಿನ್ನಬೇಡವೆಂದು ಹೇಳಿದ್ದಾರೆ. ಇದು ಖುರ್‌ಆನ್ ಗ್ರಂಥದಲ್ಲಿನ ವಾಕ್ಯ ಎನ್ನುವುದೇ ಅಲ್ಲದೆ ಮುಸ್ಲಿಮ್ ಹಿರಿಯರು ಬಹಳಜನ ಈ ಆಹಾರಗಳನ್ನು ತಿನ್ನಬೇಡವೆಂದು ಹೇಳುವುದಲ್ಲದೆ ತಾವು ಕೂಡಾ ತಿನ್ನದಂತಿದ್ದಾರೆ. ಇಲ್ಲಿ ನಾವು ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ಆಲೋಚಿಸಬೇಕಾಗಿರುತ್ತದೆ. ಶಾಸ್ತ್ರಕ್ಕೆ ಸರಿಹೋಗದಿದ್ದರೆ, ಶಾಸ್ತ್ರಬದ್ಧ ಅಲ್ಲದಿದ್ದರೆ ಅದನ್ನು ದೇವರ ವಾಕ್ಯವಾಗಿ ಲೆಕ್ಕಿಸಬಾರದು.

ಶಾಸ್ತ್ರದ ಪ್ರಕಾರ ನೋಡಿದರೆ ಕರ್ಮದಿಂದ ಮನುಷ್ಯನಿಗೆ ಕಷ್ಟ ಸುಖಗಳ ಅನುಭವ ನಡೆಯುತ್ತಿರುತ್ತದೆ. ಕಷ್ಟವನ್ನು ಅನುಭವಿಸಬೇಕೆಂದರೆ ಅದಕ್ಕೆ ತಕ್ಕ ಪಾಪ ಇರಬೇಕು. ಹಾಗೆಯೇ ಸುಖವನ್ನು ಅನುಭವಿಸುವುದಕ್ಕೆ ಅದಕ್ಕೆ ತಕ್ಕ ಪುಣ್ಯ ಇರಬೇಕು. ಮನುಷ್ಯನಿಗೆ ಲಭಿಸುವ ಆಹಾರದಿಂದ ಸುಖ ಮತ್ತು ಕಷ್ಟ ಎರಡು ಇರುತ್ತವೆ. ಒಳ್ಳೆಯ ರುಚಿಕರವಾದ ಆಹಾರದಿಂದ ಸುಖವನ್ನು ಅನುಭವಿಸಬಹುದು. ನಾಲಿಗೆಗೆ ರುಚಿ ಸಿಗುವುದರಿಂದ ಜೀವಿಯು ಸುಖವನ್ನು

ಹೊಂದುತ್ತಾನೆ. ಆದ್ದರಿಂದ ಒಳ್ಳೆಯ ರುಚಿಕರವಾದ ಆಹಾರ ಲಭಿಸುವುದಕ್ಕೆ ಪುಣ್ಯ ಅಗತ್ಯ. ಒಂದುವೇಳೆ ರುಚಿಯಿಲ್ಲದ ಆಹಾರ ಕೆಟ್ಟುಹೋದ ಆಹಾರ ದೊರೆತಾಗ ಮನುಷ್ಯ ಅದನ್ನು ತಿನ್ನುವುದಕ್ಕೆ ದುಃಖಪಡಬೇಕಾಗಿ ಬರುತ್ತದೆ. ಹಾಗೆ ಒಳ್ಳೆಯ ಆಹಾರ ಅಲ್ಲದೆ ಕೆಟ್ಟ ಆಹಾರ ದೊರೆಯುವುದಕ್ಕೆ ಅವನ ಪಾಪವೇ ಕಾರಣ ಎಂದು ಹೇಳಬಹುದು. ಪಾಪ ಪುಣ್ಯ ಕರ್ಮಗಳನ್ನನುಸರಿಸಿ ಒಳ್ಳೆಯ ಕೆಟ್ಟ ಆಹಾರಗಳು ಲಭಿಸುತ್ತವೆ. ಕರ್ಮಗಳೆಲ್ಲವೂ ಪ್ರಪಂಚ ಸಂಬಂಧವಾದವು. ಕರ್ಮಗಳಿಗೆ ಅತೀತವಾದುದು ಜ್ಞಾನ ಸಂಬಂಧವಾದುದು. ಗತ ಜನ್ಮ ಪಾಪಪುಣ್ಯಗಳನ್ನು ಅನುಸರಿಸಿ ಯಾವಾಗೇನು ತಿನ್ನಬೇಕೆನ್ನುವ ನಿರ್ಣಯ ನಡೆದಿರುತ್ತದೆ. ಕರ್ಮ ನಿರ್ಣಯ ಮೊದಲೇ ನಡೆದಿರುತ್ತದೆ, ಆದ್ದರಿಂದ ಪ್ರಾರಬ್ಧಕರ್ಮವನ್ನು ಬದಲಾಯಿಸುವುದಕ್ಕೆ ಸಾಧ್ಯವಿಲ್ಲ. ನಿಷೇಧಿತ ಆಹಾರ ಎನ್ನುವುದು ಕರ್ಮಸಿದ್ಧಾಂತದಲ್ಲಿ ಇಲ್ಲ. ಪ್ರಾಪ್ತಾನುಸಾರ ಲಭಿಸಿರುವುದು ತಿನ್ನಬೇಕಾಗಿರುತ್ತದೆ. 'ನಾನು ತಿನ್ನುವುದಿಲ್ಲ' ಎನ್ನುವ ನಮ್ಮ ಇಷ್ಟ ಅಲ್ಲಿ ಕೆಲಸ ಮಾಡುವುದಿಲ್ಲ. ನಿರ್ಣಯ ನಡೆದಿರುವುದನ್ನು ತಿನ್ನದೆ ತಪ್ಪಲ್ಲ. ಇದೆಲ್ಲವೂ ದೇವರು ಇಟ್ಟಿರುವ ಕರ್ಮಕಾನೂನು. ಕರ್ಮಕ್ಕೆ ಸಂಬಂಧಿಸಿರುವುದರಲ್ಲಿ ದೇವರ ಜೋಕ್ಯ ಇರುವುದಿಲ್ಲ. ಆದ್ದರಿಂದ ಆಹಾರ ನಿಯಮವನ್ನು ದೇವರು ಹೇಳಿರುವುದಿಲ್ಲ. ಈ ವಾಕ್ಯ ಮನುಷ್ಯರು ಹೇಳಿರುವುದಾಗಿದೆ. ಒಂದುವೇಳೆ ಇದು ಏನಾದರೂ ಸೂಕ್ಷ್ಮವಾಕ್ಯ ಎನ್ನುವುದಕ್ಕೆ ಕೂಡಾ ಸಾಧ್ಯವಿಲ್ಲ. ಈ ವಾಕ್ಯದಲ್ಲಿ ಸ್ಥೂಲವೇ ಇದೆ. ಕರ್ಮಪ್ರಕಾರ ನಿರ್ಣಯಿಸಿರುವುದು ತಪ್ಪದೆ ನಡೆಯುತ್ತದೆಂದು ಪ್ರಥಮ ದೈವ ಗ್ರಂಥದಲ್ಲಿ ಹೇಳಿದ ದೇವರು ತನ್ನ ಮಾತಿಗೆ ವಿರುದ್ಧವಾಗಿ ಅಂತಿಮ ದೈವ ಗ್ರಂಥದಲ್ಲಿ ಹೇಳುವುದಿಲ್ಲ ಅಲ್ಲವೆ! ಆದ್ದರಿಂದ ಆಹಾರ ಲಭಿಸುವುದು, ಲಭಿಸದಿರುವುದು, ಒಳ್ಳೆಯದಾಗಲಿ, ಕೆಟ್ಟದಾಗಲಿ ಲಭಿಸುವುದು, ಲಭಿಸದಿರುವುದು ಅವನ ಕರ್ಮವನ್ನನುಸರಿಸಿ ಇರುತ್ತದೆ. ಆದುದರಿಂದ ಎಲ್ಲಾ ವಿಧಗಳ ಬ್ರಹ್ಮ ವಿದ್ಯಾ ಶಾಸ್ತ್ರದ ಪ್ರಕಾರ ಇದನ್ನು 'ಕಲ್ಪಿತ ವಾಕ್ಯವೆಂದು' ನಿರ್ಣಯಿಸಿ ಹೇಳಬಹುದು. ಪ್ರಪಂಚ ಸಂಬಂಧ ವಿಷಯಗಳೆಲ್ಲವೂ ಕರ್ಮಕ್ಕೆ ಸಂಬಂಧಿಸಿರುವವು. ಅವುಗಳಲ್ಲಿ ಮನುಷ್ಯನಿಗೆ ಸ್ವತಂತ್ರತೆ ಇರುವುದಿಲ್ಲ. ಸ್ವತಂತ್ರ

ಜ್ಞಾನ ತಿಳಿಯುವುದರಲ್ಲಿ, ದೇವರ ಆರಾಧನೆ ಮಾಡುವುದರಲ್ಲಿ ಇರುತ್ತದೆ. ಆದುದರಿಂದ ದೇವರು ಮನುಷ್ಯನಿಗೆ ದೈವ ಜ್ಞಾನವನ್ನು ಪ್ರಥಮ ದೈವಗ್ರಂಥದಲ್ಲಿ ಹೇಳಿದ್ದಾನೆ. ಅದೇ ವಿಧಾನವನ್ನು ಅನುಸರಿಸಿ ಉಳಿದ ಎರಡು ಗ್ರಂಥಗಳಲ್ಲಿ ಕೂಡಾ ದೈವಜ್ಞಾನವನ್ನು ಹೇಳಿದ್ದಾನೆ. ಪ್ರಪಂಚ ಕೆಲಸಗಳನ್ನು ಮಾಡಬೇಡವೆಂದು ಹೇಳಲಿಲ್ಲ ಆದರೆ, ತನ್ನ ಪ್ರಾರ್ಥನೆ ಮಾಡೆಂದಿದ್ದಾನೆ. ಪ್ರಾರ್ಥನೆ ಮನುಷ್ಯನ ಇಷ್ಟದಪ್ರಕಾರ ನಡೆಯುತ್ತದೆ. ಪ್ರಪಂಚ ಕಾರ್ಯಗಳು ಮನುಷ್ಯನ ಇಷ್ಟದ ಪ್ರಕಾರ ನಡೆಯುವುದಿಲ್ಲ. ಆದ್ದರಿಂದ ದೇವರು (ಅಲ್ಲಾಹ್) ಈ ವಚನವನ್ನು ಹೇಳಿರುವುದಿಲ್ಲ. ಮನುಷ್ಯನಿಗೆ ದೇವರ ಜ್ಞಾನ ಹೇಳಲ್ಪಟ್ಟಿದೆ. ದೇವರ ಜ್ಞಾನದ ಪ್ರಕಾರ ದೇವರ ಆರಾಧನೆ ಹೇಳಲ್ಪಟ್ಟಿದೆ. ಅಷ್ಟೇ ಹೊರತು ಪ್ರಪಂಚ ಸಂಬಂಧವಾದವು, ಕರ್ಮ ಸಂಬಂಧವಾದವು ಹೇಳಲಿಲ್ಲ.

**17) ಪ್ರಶ್ನೆ :– ಈಗ ಕೇಳುವ ಪ್ರಶ್ನೆಯನ್ನು ಇದಕ್ಕುಮುನ್ನ ಬಹಳಸಲ, ಬಹಳಜನ ಮುಸ್ಲಿಮ್ ಹಿರಿಯರನ್ನು ಕೇಳಿದ್ದೇನೆ. ಆದರೇ ಯಾರೂ ಇಲ್ಲಿಯವರೆಗು ಸರಿಯಾದ ಉತ್ತರವನ್ನು ಹೇಳಲಿಲ್ಲ. ಶಾಸ್ತ್ರಬದ್ಧತೆಯನ್ನು ತೋರಿಸದಂತೆ ಯಾರ ಇಷ್ಟಬಂದಂತೆ ಅವರು ಹೇಳುತ್ತಿದ್ದಾರೆ. ಆದ್ದರಿಂದ ನಮಗೆ ಈ ಪ್ರಶ್ನೆಗೆ ಉತ್ತರ ಸಿಗಲಿಲ್ಲವೆಂದೇ ಹೇಳಬಹುದು. ನಾನು ಕೇಳುವ ಈ ಪ್ರಶ್ನೆಗೆ ದಯೆಮಾಡಿ ಉತ್ತರವನ್ನು ಹೇಳಬೇಕಾಗಿ ಕೋರುತ್ತಿದ್ದೇನೆ. ಈ ಪ್ರಶ್ನೆ ಏನೆಂದರೆ! ಮುಹಮ್ಮದ್ ಪ್ರವಕ್ತರವರಿಗೆ ಜಿಬ್ರಯೇಲ್ ಜ್ಞಾನ ಹೇಳಿದ್ದಾನೆಂದು, 23 ವರ್ಷಗಳಿಂದ ಖುರ್‌ಆನ್ ಜ್ಞಾನವನ್ನು ಪ್ರವಕ್ತ ತನ್ನ ಪ್ರಜೆಗಳಿಗೆ ಜಿಬ್ರಯೇಲ್ ಹೇಳಿದ ಜ್ಞಾನವನ್ನೇ ಹೇಳಿದ್ದಾನೆ. ಇದು ವಾಸ್ತವವೇ ಆದರೆ ಕೆಲವರು ಆಕಾಶವಾಣಿ ಪ್ರವಕ್ತರವರಿಗೆ ಹೇಳಿದೆಯೆಂದು ಹೇಳುತ್ತಿದ್ದಾರೆ. ಗ್ರಂಥದಲ್ಲಿ ಕೂಡಾ ಅಲ್ಲಲ್ಲಿ ಪ್ರವಕ್ತರವರಿಗೆ ವಹಿ ಮೂಲಕ ಜ್ಞಾನ ಬಂದಿದೆಯೆಂದು ಹೇಳುತ್ತಿದ್ದಾರೆ. ಇದರಲ್ಲಿ ಯಾವುದು ನಿಜ? ಎಂದು ಕೇಳುತ್ತಿದ್ದೇನೆ.**

**ಉತ್ತರ :–** ದೇವರು ಮೂರು ವಿಧಗಳಾಗಿ ತನ್ನ ಬೋಧನೆಯನ್ನು ತಿಳಿಸುತ್ತೇನೆಂದು ಖುರ್‌ಆನ್ ಗ್ರಂಥದಲ್ಲಿಯೇ 42ನೇ ಸೂರಾ 51ನೇ ಆಯತ್‌ನಲ್ಲಿ ಹೇಳಿದ್ದಾನೆ. ಅಲ್ಲಿ ಹೇಳಿರುವುದು ಹೀಗೆ ಇದೆ. **(42–51) "ದೇವರು ಯಾವ ಮಾನವ**

**ನೊಂದಿಗೂ ಪ್ರತ್ಯಕ್ಷವಾಗಿ ಮಾತನಾಡುವುದಿಲ್ಲ, ದೇವರೊಂದಿಗೆ ಮಾತನಾಡುವುದು ಮನುಷ್ಯನಿಗೆ ಸಾಧ್ಯವಾಗುವ ಕೆಲಸವಲ್ಲ. ದೇವರು ತನ್ನ ಜ್ಞಾನವನ್ನು ವಾಣಿ ಮೂಲಕ (ವಹಿ ಮೂಲಕ) ಇಲ್ಲವೆ ತೆರೆ ಮರೆಯಿಂದ ಮನುಷ್ಯನಿಗೆ ಸೇರಿಸುತ್ತಾನೆ. ಇಲ್ಲವೇ ತಾನು ಕೋರಿರುವುದು ತನ್ನ ಆಜ್ಞೆಯಿಂದ ಸೂಚಿಸುವುದಕ್ಕೆ ತನ್ನ ಪ್ರತಿನಿಧಿಯನ್ನು ಕಳಿಸುತ್ತಾನೆ. ಆತನು ಮಹೋನ್ನತನು, ಎಷ್ಟೋ ವಿವೇಕವಂತನು."** ಇಲ್ಲಿ ಈ ವಾಕ್ಯದಲ್ಲಿ ದೇವರು ಮನುಷ್ಯರಿಗೆ ಜ್ಞಾನವನ್ನು ತಿಳಿಸುವ ಮೂರು ಪದ್ಧತಿಗಳು ತಿಳಿಸಿದ್ದಾನೆ. ಅದರಲ್ಲಿ ಒಂದು ವಾಣಿ (ವಹಿ) ಮೂಲಕ ಹೇಳುವುದು ಎಂದು ಇದೆ. 'ವಾಣಿ' ಎಂದರೇ ಶಬ್ದ ಎಂದು ಅರ್ಥ. ಶಬ್ದದ ಮೂಲಕ ಸೃಷ್ಟಿ ಆದಿಯಲ್ಲಿಯೇ ದೇವರು ಜ್ಞಾನವನ್ನು ಹೇಳುವುದಾಗಿದೆ. ಆದರೇ ಅದು ನೇರವಾಗಿ ಮನುಷ್ಯರಿಗೆ ಸೇರಲಿಲ್ಲ. 'ದೇವರು ಪ್ರತಿ ವಿಷಯವನ್ನು ತಿಳಿದವನು'. ಯಾವುದನ್ನಾದರೂ ಒಂದು ಪ್ರಣಾಳಿಕಾ ಬದ್ಧವಾಗಿ ಮಾಡಬಲ್ಲನು. ದೇವರು ಮನುಷ್ಯರಿಗಾಗಿ ವಾಣಿ ಮೂಲಕ ಹೇಳಿದ ಜ್ಞಾನ ಮನುಷ್ಯರಿಗೆ ಸೇರಲಿಲ್ಲ ಅಲ್ಲವೆ! ಎಂದು ಕೆಲವರು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಈ ವಿಧವಾಗಿ ಇದೆ. 'ದೇವರು ಪ್ರಣಾಳಿಕೆ ಪ್ರಕಾರ ಏನಾದರೂ ಮಾಡುತ್ತಾನೆ' ಎಂದು ಹೇಳಿಕೊಂಡಿದ್ದೇವೆ ಅಲ್ಲವೆ! ಆದ್ದರಿಂದ ದೇವರು ಮೊದಲು ಹಾಗೆ ಹೇಳುವುದಕ್ಕೆ ಕೂಡಾ ಕಾರಣವಿದೆ. ಈ ವಿಷಯವನ್ನು ಪೂರ್ತಿ ವಿವರವಾಗಿ ತಿಳಿದರೆ ಹೀಗೆ ಇದೆ.

ದೇವರು ಯಾವ ಕೆಲಸ ಮಾಡದವನು. ದೇವರು ನಾಮ, ರೂಪ, ಕ್ರಿಯಾ ರಹಿತನು,' ಕ್ರಿಯಾರಹಿತನಾಗಿರುವುದರಿಂದ ಆತನು ತನ್ನ ಜ್ಞಾನವನ್ನು ಪ್ರಜೆಗಳಿಗೆ ಹೇಳುವ ಕಾರ್ಯವನ್ನು ಕೂಡಾ ಮಾಡುವುದಿಲ್ಲ. ಹಾಗೆ ಮಾಡಿದರೆ ತನ್ನ ಧರ್ಮಕ್ಕೆ ತಾನೇ ವಿರುದ್ಧವಾಗಿ ನಡೆದಂತಾಗುತ್ತದೆ. ಆದ್ದರಿಂದ ದೇವರು ತನ್ನ ಕೆಲಸವನ್ನು ಮಾಡುವುದಕ್ಕೆ ಸೃಷ್ಟಿ ಆದಿಯಿಂದ ಆತ್ಮವನ್ನು ತಯಾರು ಮಾಡಿ ಇಟ್ಟುಕೊಂಡಿದ್ದಾನೆ. ಜ್ಞಾನವನ್ನು ಹೇಳುವುದಕ್ಕೆ ಆತ್ಮವನ್ನು ಸೃಷ್ಟಿಸಿದವನೇ ಜ್ಞಾನವನ್ನು ಕೇಳುವುದಕ್ಕೆ ಜೀವಿಯನ್ನು ಕೂಡಾ ತಯಾರು ಮಾಡಿಕೊಂಡಿದ್ದಾನೆ.

ದೇವರು ಆತ್ಮಸ್ವರೂಪನು ಆಗಿರುವುದರಿಂದ ತನ್ನ ಸ್ವರೂಪದಿಂದ ಆತ್ಮವನ್ನು, ಜೀವಾತ್ಮವನ್ನು ಸೃಷ್ಠಿಸಿದ್ದಾನೆ. ನಂತರ ಸರ್ವಜೀವಿಗಳನ್ನು ಸೃಷ್ಠಿಸಿದ್ದಾನೆ. ಆದರೇ ದೇವರ ದೃಷ್ಠಿಯಲ್ಲಿ ತಯಾರಾದ ಜೀವಿಗಳೆಲ್ಲರೂ ಎರಡು ವಿಧಗಳಲ್ಲಿ ವಿಭಜಿಸಲ್ಪಟ್ಟಿದ್ದಾರೆ. ಒಂದು ವಿಭಾಗದವರೆಲ್ಲರೂ ಪಾಲಿಸಲ್ಪಡುವವರು. ಎರಡನೆ ಭಾಗವೆಲ್ಲವೂ ಪಾಲಿಸುವವರು ಇದ್ದಾರೆ. ಪಾಲಿಸುವವರಲ್ಲಿ ಗ್ರಹಗಳು, ಭೂತಗಳು ಎನ್ನುವ ಎರಡು ವಿಧಗಳವರಿರುವಾಗ, ಪಾಲಿಸಲ್ಪಡುವವರಲ್ಲಿ ಮನುಷ್ಯರು, ಪ್ರಾಣಿಗಳು, ವೃಕ್ಷಗಳು ಬಳ್ಳಿಗಳು, ಕ್ರಿಮಿಗಳು, ಕೀಟಕಗಳು ಎನ್ನುವವು ಇವೆ. ಇವುಗಳೆಲ್ಲವುಗಳಲ್ಲಿ ಜೀವಾತ್ಮ, ಆತ್ಮಗಳಿರುತ್ತವೆ. ದೇವರು ಸೃಷ್ಠಿಸಿದ ಎರಡು ಭಾಗದವರಿಗೆ ಜ್ಞಾನ ತಿಳಿಯಬೇಕೆನ್ನುವ ಉದ್ದೇಶದಿಂದ ಮೊದಲು ಜ್ಞಾನವನ್ನು ತಾನು ಸ್ವತಃವಾಗಿ ಹೇಳದೆ ಆಕಾಶವಾಣಿ ಮೂಲಕ ಗುಡುಗುಗಳ ಶಬ್ದದಿಂದ ಹೇಳಿಸಿದನು. ಆಕಾಶ ಒಂದು ಭೂತವಾಗುವುದರಿಂದ ಕೇಳುವುದೇ ಹೊರತು ಹೇಳುವುದಲ್ಲ. ಆದ್ದರಿಂದ ಆಕಾಶದಲ್ಲಿರುವ ಆತ್ಮವೇ ಸ್ವತಃವಾಗಿ ಜ್ಞಾನವನ್ನು ಹೇಳಿದೆ. ದೇವರ ಕೆಲಸವನ್ನು ಮಾಡುವುದು ಆತ್ಮವೇ.

ಆಕಾಶ ಭೂತದಲ್ಲಿರುವ ಆತ್ಮ, ಆಕಾಶ ಶಬ್ದವಾದ ಗುಡುಗುಗಳ ಶಬ್ದದಿಂದ ದೇವರ ಜ್ಞಾನವನ್ನು ಬಹಿರ್ಗತ ಮಾಡಿದಾಗ ಆ ಶಬ್ದವನ್ನು ಆಕಾಶದಲ್ಲಿನ ಸೂರ್ಯಗ್ರಹ ಕೇಳಿಸಿಕೊಂಡಿದೆ. ಶಬ್ದದಲ್ಲಿನ ಜ್ಞಾನವನ್ನು ತಿಳಿದುಕೊಂಡಿದೆ. ದೇವರ ಜ್ಞಾನ ದೇವರಿಗೆ ಹೊರತು ಇತರೆ ಮಾನವರಿಗೆ ಯಾರಿಗೂ ಗೊತ್ತಿಲ್ಲ. ಮಾನವರಿಗೇ ಅಲ್ಲ ಪ್ರಪಂಚದಲ್ಲಿ ಯಾರಿಗೂ ತಿಳಿದಿಲ್ಲ. ಆದರೇ ದೇವರ ಪ್ರತಿನಿಧಿಯಾದ ಆತ್ಮಗೊಬ್ಬನಿಗೆ ತಿಳಿದಿದೆ. ಆದುದರಿಂದ ದೇವರು ಕೆಲಸ ಮಾಡದಂತೆ ದೇವರ ಕೆಲಸವನ್ನು ಆತ್ಮ ಮಾಡಿದೆ. ಆಗ ಸೃಷ್ಠಿಯನ್ನು ಪಾಲಿಸುವ ಪಾಲಕರಲ್ಲಿ ಮುಖ್ಯನಾದ ಸೂರ್ಯನು ಶಬ್ದದಲ್ಲಿನ ಜ್ಞಾನವನ್ನು ಗ್ರಹಿಸಿ ತಾನು ತಿಳಿದ ಜ್ಞಾನವನ್ನು ಇತ್ತ ಪಾಲಿಸುವವರಿಗೆ, ಅತ್ತ ಪಾಲಿಸಲ್ಪಡುವವರಿಗೆ ಇಬ್ಬರಿಗು ತಿಳಿಸಿದ್ದಾನೆ. ಈ ವಿಧವಾಗಿ ದೇವರು ಅಂದುಕೊಂಡಿರುವುದು ನೆರವೇರಿದೆ. ನೆರವೇರಿದ ವಿಧಾನವನ್ನು ವಿವರಿಸಿಕೊಂಡರೆ

ಹೀಗೆ ಇದೆ. ಆಕಾಶವಾಣಿಯಿಂದ ಶಬ್ದವನ್ನು ಗ್ರಹಿಸಿದ ಸೂರ್ಯನು ತನ್ನ ಪರಿವಾರವಾದ ಪಾಲಿಸುವವರಿಗೆಲ್ಲ ಜ್ಞಾನವನ್ನು ಮೇಲೆ ಆಕಾಶದಲ್ಲಿಯೇ ತಿಳಿಸಿದ್ದಾನೆ. ನಂತರ ಮನುಷ್ಯರಿಗೆ ತಿಳಿಸುವುದಕ್ಕೆ ಭೂಮಿಮೇಲಕ್ಕೆ ಬಂದು ದಕ್ಷಿಣ ಭಾರತದೇಶದಲ್ಲಿರುವ **'ಮನು' ಎನ್ನುವ** ವ್ಯಕ್ತಿಗೆ ಮೊಟ್ಟಮೊದಲು ಜ್ಞಾನವನ್ನು ತಿಳಿಸಿದ್ದಾನೆ. ನಂತರ ಮನುವಿನ ಮೂಲಕ ಭೂಮಂಡಲವೆಲ್ಲ ಜ್ಞಾನ ಹಬ್ಬಿಕೊಂಡಿದೆ.

ದೇವರು ಹೇಳಿದ ಮೂರು ವಿಧಾನಗಳಲ್ಲಿ ಆಕಾಶವಾಣಿ ಮೂಲಕ ಹೇಳುವ ವಿಧಾನ ಸೃಷ್ಟಿ ಆದಿಯಲ್ಲಿಯೇ ನಡೆದುಹೋಗಿದೆ. **ವಾಣಿ ಮೂಲಕ (ವಹಿ ಮೂಲಕ)** ಹೇಳಿದ ಜ್ಞಾನ ಮೊದಲು ಪಾಲಕರಿಗೆ ಸೇರಿ ನಂತರ ಪಾಲಿಸಲ್ಪಡುವವರಿಗೆ ಸೇರಿದೆ. ವಾಣಿ ಮೂಲಕ ಹೇಳಿದ ಜ್ಞಾನ ಕೃತಯುಗ ಆರಂಭದಲ್ಲಿ ಹೇಳಿದಾಗ ದ್ವಾಪರಯುಗದ ಕೊನೆಯಲ್ಲಿ ಗ್ರಂಥರೂಪವಾಗಿದೆ. ಅದನ್ನೇ 'ಪ್ರಥಮ ದೈವ ಗ್ರಂಥ' ಎಂದು ಕರೆಯುತ್ತಿದ್ದೇವೆ. ಪ್ರಥಮ ದೈವ ಗ್ರಂಥದ ಹೆಸರೇ **"ಭಗವದ್ಗೀತೆ"** ಎಂದು ಹೇಳುತ್ತಿದ್ದೇವೆ. ದೇವರು ಹೇಳಿದ ಮೊದಲ ವಿಧಾನ ಗ್ರಂಥವಾಗಿರುವುದರಿಂದ ಅದನ್ನು ಪ್ರಥಮ ದೈವಗ್ರಂಥವೆಂದು ಕರೆಯುತ್ತಿದ್ದೇವೆ. ಮೂರು ವಿಧಾನಗಳಲ್ಲಿ ಒಂದು ವಿಧಾನ ಸೃಷ್ಟಿ ಆದಿಯಲ್ಲಿಯೇ ಕಳೆದುಹೋಗಿ, ಇನ್ನೂ ಎರಡು ವಿಧಾನಗಳು ಉಳಿದಿವೆ. ಉಳಿದ ಎರಡು ವಿಧಾನಗಳಲ್ಲಿ **"ತನ್ನ ಪ್ರತಿನಿಧಿಯನ್ನು ಕಳಿಸಿ ತನ್ನ ಪ್ರತಿನಿಧಿ ಮೂಲಕ ಜ್ಞಾನವನ್ನು ಹೇಳಿಸುವುದು"** ಎನ್ನುವ ವಿಧಾನ ಯೇಸು ಮೂಲಕ ಹೇಳಿಸುವುದು ನಡೆದಿದೆ. ಯೇಸು ದೇವರ ಪ್ರತಿನಿಧಿಯಾಗಿ ಜ್ಞಾನವನ್ನು ಹೇಳಿದಾಗ ಅದು ಗ್ರಂಥರೂಪವಾದಾಗ ಅದನ್ನು 'ದ್ವಿತೀಯ ದೈವಗ್ರಂಥ' ಎಂದು ಕರೆದಿದ್ದೇವೆ. ಹೀಗೆ ದೇವರು ಹೇಳಿದ ಎರಡು ವಿಧಾನಗಳು ನಡೆದುಹೋಗಿ ಮೂರನೆ ವಿಧಾನ **"ತೆರೆಮರೆಯಿಂದ ಹೇಳುವುದು"** ಒಂದು ಉಳಿದಿತ್ತು. ಕೊನೆಗದು ಮುಹಮ್ಮದ್ ಪ್ರವಕ್ತ ಕಾಲದಲ್ಲಿ ನೆರವೇರಿದೆ. ಜಿಬ್ರಯೇಲ್ ತೆರೆಮರೆಯಿಂದ ಪ್ರವಕ್ತರಿಗೆ ಜ್ಞಾನವನ್ನು ಹೇಳಿದ್ದಾನೆ. ಹಾಗೆ ಹೇಳಿದ ಜ್ಞಾನ ಕೊನೆಗದು

ಗ್ರಂಥರೂಪವಾದಾಗ ಅದನ್ನೇ ಅಂತಿಮ ದೈವಗ್ರಂಥ ಎಂದಿದ್ದೇವೆ. ದೇವರು ಹೇಳಿದ ಮೂರು ವಿಧಾನಗಳು ನೆರವೇರಿದ ಕ್ರಮವನ್ನು ಅನುಸರಿಸಿ ಆಯಾ ಗ್ರಂಥಗಳಿಗೆ ಆಯಾ ಹೆಸರುಗಳು ಬರುವುದು ನಡೆದಿದೆ. ಕೊನೆಯಲ್ಲಿ ನೆರವೇರಿದ ಜ್ಞಾನದ ಹೆಸರು 'ಕೊನೆಯ ದೈವ ಗ್ರಂಥ' ಎಂದು ಹೇಳಿದ್ದಾರೆ.

ಖುರಾನ್ ಗ್ರಂಥದಲ್ಲಿ (42–51) ರಲ್ಲಿ ಹೇಳಿರುವುದು ಕ್ರಮವಾಗಿ **ಒಂದು ವಾಣಿ (ವಹಿ) ಮೂಲಕ, ಎರಡು ತೆರೆಮರೆಯಿಂದ, ಮೂರು ತನ್ನ ಪ್ರತಿನಿಧಿ ಮೂಲಕ ಜ್ಞಾನವನ್ನು ತಿಳಿಸುವುದು** ಎಂದು ಇದೆ. ಆದರೇ ಇಲ್ಲಿ ಭೂಮಿಮೇಲೆ ನೆರವೇರಿರುವುದು ಮೊದಲನೆಯದು ಮೊದಲೇ ನೆರವೇರಿದೆ. ನಂತರ ಕೊನೆಯದು ಎರಡನೆ ಸಲ ಈಡೇರಿದೆ. ಮಧ್ಯದಲ್ಲಿ ಹೇಳಿರುವುದು ಕೊನೆಯಲ್ಲಿ ನೆರವೇರಿದೆ. ಭೂಮಿಮೇಲೆ ನೆರವೇರಿರುವುದನ್ನು ಅನುಸರಿಸಿ ಅಲ್ಲಿ ಹೇಳಿದ ಬೋಧನೆಗಳಿಗೆ ಕ್ರಮವಾಗಿ ಅದೇ ಹೆಸರುಗಳು ಇಟ್ಟು ಪ್ರಥಮ ದೈವಗ್ರಂಥ, ದ್ವಿತೀಯ ದೈವಗ್ರಂಥ, ಅಂತಿಮ ದೈವಗ್ರಂಥ ಎಂದು ಹೇಳುವುದು ನಡೆದಿದೆ. ಮಧ್ಯದಲ್ಲಿ ಹೇಳಿದ ತೆರೆಮರೆಯಿಂದ ಹೇಳುವುದು ಕೊನೆಯಲ್ಲಿ ನೆರವೇರಿದಾಗ! ಕೊನೆಯಲ್ಲಿ ಹೇಳಿದ ತನ್ನ ಪ್ರತಿನಿಧಿ ಮೂಲಕ ಜ್ಞಾನ ಹೇಳುವುದು ಮಧ್ಯದಲ್ಲಿ ನೆರವೇರಿದೆ. ಕೊನೆಯಲ್ಲಿ ನೆರವೇರಿದ ತೆರೆಮರೆಯಿಂದ ಹೇಳುವುದು ಹೇಗೆ ನಡೆದಿದೆಯೋ ವಿವರಿಸಿಕೊಂಡು ನೋಡಿದರೆ ಇಲ್ಲಿ ನೀನು ಕೇಳಿದ ಪ್ರಶ್ನೆಗೆ ಉತ್ತರ ಸಿಗಬಲ್ಲದು. ಪ್ರಶ್ನೆಯಲ್ಲಿ ವಹಿ (ವಾಣಿ) ಮೂಲಕ ಕೇಳಿದ್ದಾನಾ ಅಥವಾ ಜಿಬ್ರಯೇಲ್ ಹೇಳಿರುವುದರ ಮೂಲಕ ಕೇಳಿದ್ದಾನಾ? ಎಂದು ಕೇಳಿದ್ದಾರೆ. ಇಲ್ಲಿ ಪ್ರತಿ ಮನುಷ್ಯನಿಗು ಪೂರ್ತಿ ಶೇ. ನೂರರಷ್ಟು ವಿಚಕ್ಷಣೆ ಅಗತ್ಯ. ವಿಚಕ್ಷಣೆ ಮೂಲಕ ಪ್ರಶ್ನಿಸಿಕೊಳ್ಳುತ್ತಾ ಉತ್ತರ ತೆಗೆದುಕೊಳ್ಳುತ್ತಾ ಮುಂದಕ್ಕೆಹೋದರೆ ಸರಿಯಾದ ಉತ್ತರ ದೊರೆಯುತ್ತದೆ. ಇಲ್ಲದಿದ್ದರೆ ಇತರರು ಹೇಗೆ ಹೇಳಿದರೆ ಹಾಗೆ ಹೇಳಬೇಕಾಗಿ ಬರುತ್ತದೆ. ಹಾಗೆ ಹೇಳುವುದು ಸತ್ಯವಾಗಬಹುದು ಅಥವಾ ಅಸತ್ಯವು ಆಗಬಹುದು. ಆದ್ದರಿಂದ ಇತರರು ಹೇಳಿದ್ದನ್ನು ಕೇಳದಂತೆ ಆ ದಿನಗಳಲ್ಲಿ ಏನು ನಡೆದಿದೆಯೋ ಅಲ್ಲಿಗೆ ಹೋಗಿ

ನೋಡಿದರೆ ವಿಷಯ ಸಂಪೂರ್ಣವಾಗಿ ತಿಳಿಯಬಲ್ಲದು. ಈಗ ತಿಯುವಂತಹ ವಿಷಯ ಹೊಸ ವಿಷಯವಾದ್ದರಿಂದ ಜಾಗ್ರತೆಯಾಗಿ ಕೇಳಿರಿ.

ಮನುಷ್ಯರಲ್ಲಿ ಅವರ ಇಂದ್ರಿಯ ಶಕ್ತಿಗಳನ್ನನುಸರಿಸಿ ನಾಲ್ಕು ವಿಧಗಳಾಗಿ ವಿಭಜಿಸಿ ಹೇಳಬಹುದು. ಜ್ಞಾನೇಂದ್ರಿಯಗಳಲ್ಲಿ ಕಣ್ಣು, ಕಿವಿ ಎರಡು ಬಹಳ ಮುಖ್ಯವಾದವು. ಈ ಎರಡರ ಮೂಲಕವೇ ಹೆಚ್ಚಾಗಿ ಪಾಪಪುಣ್ಯಗಳು ಬರುತ್ತಿರುತ್ತವೆ. ಶರೀರದಲ್ಲಿ ಈ ಎರಡು ಜ್ಞಾನೇಂದ್ರಿಯಗಳಿಗೆ ಪ್ರತ್ಯೇಕತೆ ಇದೆ. ಸಹಜವಾಗಿ ಕಣ್ಣು, ಕಿವಿ ಎರಡು ಸ್ಥೂಲವಾಗಿರುವುದನ್ನು ನೋಡಬಲ್ಲವು, ಹಾಗೇ ಕೇಳಬಲ್ಲವು. ಆದರೇ ಸೂಕ್ಷ್ಮವಾಗಿರುವುದನ್ನು ಕಣ್ಣು ನೋಡಲಾರದು, ಕಿವಿ ಕೇಳಲಾರದು. ಸೂಕ್ಷ್ಮವಾಗಿರುವವುಗಳ ಬಗ್ಗೆ ಎಲ್ಲರೂ ಒಂದೇ ಸ್ಥಿತಿ ಹೊಂದಿ ನೋಡಲಾರದೆ, ಕೇಳಲಾರದೆ ಸೂಕ್ಷ್ಮವನ್ನು ಕುರಿತು ಏನು ತಿಳಿಯದೆ ಇರುತ್ತಾರೆ. ಆದರೇ ಸೂಕ್ಷ್ಮ ಶರೀರಗಳಾದ ದೆವ್ವಗಳ ಬಗ್ಗೆ ಎಲ್ಲರೂ ತಿಳಿಯದ ಸ್ಥಿತಿಯಲ್ಲಿ ಇದ್ದರೂ ಕೆಲವರು ಅಪರೂಪವಾಗಿ ನೋಡುತ್ತಾರೆ, ಕೇಳುತ್ತಾರೆ ಅನ್ನುವಂತಿರುತ್ತಾರೆ. ಆದ್ದರಿಂದ ಮನುಷ್ಯನಿಗಿರುವ ಇಂದ್ರಿಯ ಶಕ್ತಿಗಳನ್ನು ಅನುಸರಿಸಿ ಮನುಷ್ಯರನ್ನು ನಾಲ್ಕು ವಿಧಗಳಾಗಿ ವಿಭಜಿಸಬಹುದು. ಒಂದು ಸೂಕ್ಷ್ಮ ಶರೀರಗಳು ಸ್ವಲ್ಪವೂ ಕಾಣಿಸದವರು, ಕೇಳಿಸದವರು. ಇವರ ಕಣ್ಣುಗಳಿಗೆ ಸೂಕ್ಷ್ಮ ಆಕಾರ ಕಾಣಿಸುವುದಿಲ್ಲ, ಹಾಗೇ ಇವರ ಕಿವಿಗಳಿಗೆ ಸೂಕ್ಷ್ಮ ಶಬ್ದಗಳು ಕೇಳಿಸುವುದಿಲ್ಲ. ಇಂತಹವರು ನೂರಕ್ಕೆ ತೊಂಭತ್ತರಷ್ಟು ಜನರು ಇದ್ದಾರೆ. ಎರಡನೆ ವಿಧದ ಮನುಷ್ಯರಲ್ಲಿ ಅವರ ಕಣ್ಣುಗಳಿಗೆ ಸೂಕ್ಷ್ಮ ಆಕಾರಗಳು ಕಾಣಿಸುತ್ತವೆ, ಹಾಗೇ ಅವರ ಕಿವಿಗಳಿಗೆ ಸೂಕ್ಷ್ಮ ಶಬ್ದಗಳು ಕೇಳಿಸುತ್ತವೆ. ಇಂತಹವರು ಬಹಳ ಅಪರೂಪವಾಗಿರುತ್ತಾರೆ. ಅಂತಹವರನ್ನು ನಾನು ಅಲ್ಲಲ್ಲಿ ನೋಡಿದ್ದೇನೆ. ಮೂರನೆ ವಿಧದವರ ಕಣ್ಣಿಗೆ ಸೂಕ್ಷ್ಮ ಆಕಾರಗಳು ಕಾಣಿಸುತ್ತವೆ ಆದರೆ, ಅವರಿಗೆ ಸೂಕ್ಷ್ಮ ಶಬ್ದಗಳು ಕೇಳಿಸುವುದಿಲ್ಲ. ಅಂತಹವರನ್ನು ಕೂಡಾ ನಾನು ನೋಡಿದ್ದೇನೆ. ಇನ್ನು ನಾಲ್ಕನೆ ವಿಧದವರು ಹೇಗೆ ಇದ್ದಾರೆಂದರೇ! ಅವರ ಕಣ್ಣಿಗೆ ಸೂಕ್ಷ್ಮ ಆಕಾರಗಳು ಕಾಣಿಸುವುದಿಲ್ಲ. ಆದರೇ ಅವರ ಕಿವಿಗಳಿಗೆ

ಮಾತ್ರ ಸೂಕ್ಷ್ಮ ಆಕಾರಗಳು ಮಾಡಿದ ಶಬ್ದಗಳು ಕೇಳಿಸುತ್ತವೆ. ಈ ವಿಧವಾಗಿ ಮನುಷ್ಯರಲ್ಲಿ ಅವರ ಕಣ್ಣುಗಳಿಗೆ, ಕಿವಿಗಳಿಗೆ ಇರುವ ಶಕ್ತಿಗಳನ್ನನುಸರಿಸಿ ನಾಲ್ಕು ವಿಧದವರು ಇದ್ದಾರೆಂದು ಹೇಳಬಹುದು.

ಈ ವಿಧವಾಗಿ ಕಣ್ಣುಗಳಿಗು, ಕಿವಿಗಳಿಗು ಅಧಿಕ ಶಕ್ತಿಗಳಿರುವವರನ್ನು ಅತೀಂದ್ರಿಯ ಶಕ್ತಿ ಇರುವವರೆಂದು ಹೇಳಬಹುದು. ಅಂತಹವರು ಬಹಳ ಅಪರೂಪವಾಗಿರುತ್ತಾರೆ. ಮುಹಮ್ಮದ್ ಪ್ರವಕ್ತರವರಿಗೆ ಸೂಕ್ಷ್ಮ ಶರೀರ ಆಕಾರಗಳು ಕಾಣಿಸುವುದಿಲ್ಲ, ಆದರೆ ಸೂಕ್ಷ್ಮಶರೀರ ಹೇಳುವ ಮಾತುಗಳು, ಮಾಡುವ ಶಬ್ದಗಳು ಕೇಳಿಸುವ ಶಕ್ತಿ ಆತನ ಕಿವಿಗಳಿಗೆ ಇವೆ. ಜಿಬ್ರಯೇಲ್ ಭೂಮಿಮೇಲೆ ಅಂತಹ ಮನುಷ್ಯನಿಗಾಗಿಯೇ ಹುಡುಕುವಾಗ ಪ್ರವಕ್ತರವರು ಕಾಣಿಸಿದ್ದಾರೆ. ಆಗ ಜಿಬ್ರಯೇಲ್ ಪ್ರವಕ್ತರವರಿಗೇ ತನ್ನ ಜ್ಞಾನವನ್ನು ಹೇಳಬೇಕೆಂದು ಅಂದುಕೊಂಡಿದ್ದಾನೆ. ಹಾಗೆ ಅಂದುಕೊಳ್ಳುವುದಕ್ಕೆ ಕಾರಣ ಇದೆ. ಅದೇನೆಂದರೆ! ದೇವರು ಮನುಷ್ಯರಿಗೆ ಜ್ಞಾನ ತಿಳಿಸುವ ಮೂರು ವಿಧಾನಗಳಲ್ಲಿ ಎರಡು ವಿಧಾನಗಳು ಆಗಾಗಲೇ ಮುಗಿದುಹೋಗಿವೆ. ಇನ್ನು ಉಳಿದಿರುವುದು 'ತೆರೆಮರೆಯಿಂದ ಹೇಳುವ ವಿಧಾನ." ಆ ವಿಧಾನದ ಪ್ರಕಾರ ಸೂಕ್ಷ್ಮವಾಗಿರುವ ಜಿಬ್ರಯೇಲ್ ಆಕಾರ ಕಾಣಿಸಬಾರದು. ಸೂಕ್ಷ್ಮವಾಗಿರುವ ಜಿಬ್ರಯೇಲ್ ಬೋಧಿಸುವ ಮಾತುಗಳು ಮಾತ್ರ ಕೇಳಿಸಬೇಕು. ಆದ್ದರಿಂದ ಕಣ್ಣಿಗೆ ಸೂಕ್ಷ್ಮ ಕಾಣಿಸದೆ, ಸೂಕ್ಷ್ಮ ಶಬ್ದಗಳು ಕೇಳಿಸುವ ಮುಹಮ್ಮದ್ ಪ್ರವಕ್ತರವರು ಜಿಬ್ರಯೇಲ್‌ಗೆ ಲಭಿಸುವುದರಿಂದ ಪ್ರವಕ್ತರವರಿಗೇ ತನ್ನ ಬೋಧನೆ ಹೇಳುವಂತೆ ಜಿಬ್ರಯೇಲ್ ನಿರ್ಣಯಿಸಿಕೊಂಡಿದ್ದಾನೆ. ತನ್ನ ನಿರ್ಣಯದ ಪ್ರಕಾರ ಪ್ರವಕ್ತರವರು ಕಾಣಿಸುವವರೆಗು ಹುಡುಕಿ ಆತನು ಕಾಣಿಸಿದ ತಕ್ಷಣ ತನ್ನ ಜ್ಞಾನವನ್ನು ಪ್ರಾರಂಭಿಸಿದ್ದಾನೆ.

ಪ್ರವಕ್ತರವರಿಗೆ ಜಿಬ್ರಯೇಲ್ ಹೇಳಿದ್ದಾನಾ ಅಥವಾ ವಾಣಿ (ವಹಿ) ಹೇಳಿದೆಯಾ ಎನ್ನುವ ವಿಷಯದಲ್ಲಿ ಮನುಷ್ಯರು ಸ್ವಲ್ಪವಾದರೂ ವಿಚಕ್ಷಣೆ ಇಲ್ಲದಂತೆ ಮಾತನಾಡುತ್ತಿದ್ದಾರೆ. ಕೆಲವರು ವಹಿ ಮೂಲಕವೇ ತಿಳಿದಿದೆಯೆಂದು,

ಇಲ್ಲ ಜಿಬ್ರಯೇಲ್ ಸ್ವಲ್ಪ ದೂರದಿಂದ ಹೇಳಿದ್ದಾನೆಂದು ಕೆಲವರು ಹೇಳುತ್ತಿದ್ದಾರೆ. ಜಿಬ್ರಯೇಲ್‌ನನ್ನು ಪ್ರವಕ್ತರವರು ನೋಡಿದ್ದಾರೆಂದು ಕೆಲವರೂ, ನೋಡಲಿಲ್ಲ ವೆಂದು ಕೆಲವರು ಹೇಳುತ್ತಾ ಅಯೋಮಯ ಪರಿಸ್ಥಿತಿಯಲ್ಲಿ ಬೀಳಿಸುತ್ತಿದ್ದಾರೆ. ಸ್ವಲ್ಪವೂ ವಿಚಕ್ಷಣೆ ಜ್ಞಾನವನ್ನು ಉಪಯೋಗಿಸದೆ ಮಾತನಾಡುತ್ತಿದ್ದಾರೆ. ಆದ್ದರಿಂದ ಇಲ್ಲಿ ಮುಖ್ಯವಾಗಿ ಆ ವಿಷಯವನ್ನು ಕುರಿತು ಬರೆಯಬೇಕಾಗಿ ಬಂದಿದೆ. ಪ್ರವಕ್ತರವರು ಒಂದು ವಿಧವಾದ ಇಂದ್ರಿಯಶಕ್ತಿಯನ್ನು ಉಳಿದ ಮಾನವರಿಗಿಂತ ಹೆಚ್ಚಾಗಿ ಹೊಂದಿರುವುದರಿಂದ  ಜಿಬ್ರಯೇಲ್ ಪ್ರವಕ್ತರವರನ್ನು ಆರಿಸಿಕೊಂಡಿ ದ್ದಾನೆ. ಪ್ರವಕ್ತರವರು ಮೊಟ್ಟಮೊದಲು ತನ್ನ ಸುತ್ತಾ ಮುತ್ತಾ ಎಲ್ಲಿಯೂ ಯಾರೂ ಇಲ್ಲದಂತೆ (ಕಾಣಿಸದಂತೆ) ಇದ್ದರೂ ಶಬ್ದದಿಂದ ಕೂಡಿಕೊಂಡ ಮಾತನ್ನು ಕೇಳಿ ಭಯಪಟ್ಟುಹೋಗಿದ್ದಾನೆ. ಆ ಮಾತುಗಳು ಯಾವ ದೆವ್ವದ್ದೊ ಎಂದುಕೊಂಡಿದ್ದಾನೆ. ಮೊದಲು ಹಾಗೆ ಭಯಪಟ್ಟಿರುವುದರಿಂದ  ಮೂರು ದಿನಗಳು ಕ್ರಮವಾಗಿ ಜ್ವರ ಬರುವುದು ನಡೆದಿದೆ. ನಂತರ ಎರಡನೆ ಸಲ ಹೀರಾ ಗುಹೆಗಳಲ್ಲಿ ಪ್ರವಕ್ತ ಒಂಟಿಯಾಗಿ ಜಿಬ್ರಯೇಲ್ ಮಾತುಗಳನ್ನು ಕೇಳಿದರೂ ಧೈರ್ಯ ತಂದುಕೊಂಡಿದ್ದಾನೆ, ಭಯಪಡಲಿಲ್ಲ. ಜಿಬ್ರಯೇಲ್ ಕೂಡಾ ಎರಡನೆಸಲ ತಾನು ಇಂತಹವನೆಂದು, ನಿನಗೆ ದೈವಜ್ಞಾನವನ್ನು ಬೋಧಿಸುತ್ತೇನೆಂದು ಹೇಳುವುದರಿಂದ ಪ್ರವಕ್ತ ಧೈರ್ಯವಾಗಿ ಕೇಳಿಸಿಕೊಂಡಿದ್ದಾನೆ. ಕೇಳಿದ ಪ್ರತಿ ಮಾತನ್ನು ಪ್ರವಕ್ತರವರು ಮನೆಗೆ ಬಂದು ಮನೆಯ ಹತ್ತಿರ ಇರುವ ತನ್ನ ಅನುಚರರಿಗೆ ಹೇಳುತ್ತಿದ್ದನು.

ಕೆಲವು ಸಮಯಗಳಲ್ಲಿ ಆಕಾಶದಿಂದ ಜಿಬ್ರಯೇಲ್ ಕೆಳಗೆ ಬಂದಾಗ ಮುಹಮ್ಮದ್ ಪ್ರವಕ್ತರವರು ಹೀರಾ ಗುಹೆಗಳಲ್ಲಿ ಇಲ್ಲದಿರುವಾಗ ಪ್ರವಕ್ತರನ್ನು ಹುಡುಕುತ್ತಾ ಬಂದು ಪ್ರವಕ್ತರವರು ಎಲ್ಲಿ ಇದ್ದರೆ ಅಲ್ಲಿಯೇ ಹೇಳಿ ಹೋಗುತ್ತಿದ್ದನು. ಕೆಲವು ಸಂದರ್ಭಗಳಲ್ಲಿ ಹತ್ತುಜನರ ಮಧ್ಯ ಪ್ರವಕ್ತ ಪ್ರಯಾಣ ಮಾಡುವಾಗ ಜಿಬ್ರಯೇಲ್ ಪ್ರವಕ್ತಹತ್ತಿರಕ್ಕೆ ಹೋಗಿ ಪ್ರಯಾಣದಲ್ಲಿಯೇ ತನ್ನ ವಾಕ್ಯಗಳನ್ನು ಹೇಳಿ ಹೋಗುತ್ತಿದ್ದನು. ಹಾಗೆ ಹತ್ತುಜನರ ಮಧ್ಯದಲ್ಲಿ ಇರುವಾಗ ಹೇಳಿದ

ಜ್ಞಾನ ಸೂಕ್ಷ್ಮವಾಗಿರುವ ಅವರು ಹೇಳುವ ಮಾತುಗಳನ್ನು ಕೇಳುವಂತಹ ಪ್ರವಕ್ತರವರಿಗೆ ಮಾತ್ರವೇ ಕೇಳಿಸುತ್ತಿತ್ತು. ಉಳಿದವರಿಗೆ ಅದು ತಿಳಿಯುತ್ತಿರಲಿಲ್ಲ. ನಂತರ ಬಿಡುವಿನ ಸಮಯದಲ್ಲಿ ಪ್ರವಕ್ತ ತನ್ನ ಅನುಚರರಿಗೆ ಹೇಳುತ್ತಿದ್ದನು. ತನ್ನ ಅನುಚರರಿಗೆ ಪ್ರವಕ್ತ ಸ್ವತಃವಾಗಿ ಜ್ಞಾನವನ್ನು ಹೇಳುತ್ತಿದ್ದಾನೆನ್ನುವ ನಂಬಿಕೆಯಿಂದಲೇ ಇರುತ್ತಿದ್ದರು. ಜಿಬ್ರಯೇಲ್ ಯಾವಾಗ ಹೇಳಿರುವುದು ಅವರಿಗೆ ಗೊತ್ತಿಲ್ಲ ಆದ್ದರಿಂದ ಅವರು ಪ್ರವಕ್ತರೇ ಸ್ವತಃವಾಗಿ ಬೋಧಿಸುತ್ತಿದ್ದಾನೆಂದು ತಿಳಿಯುತ್ತಿದ್ದರು. ಈ ವಿಧವಾಗಿ 23 ವರ್ಷಗಳು ಜಿಬ್ರಯೇಲ್ ಜ್ಞಾನವನ್ನು ಪ್ರವಕ್ತರಿಗೆ ಬೋಧಿಸಿದರೂ ಆ ವಿಷಯವನ್ನು ಯಾರೂ ಗುರುತಿಸಲಾರದೆ ಹೋಗಿದ್ದಾರೆ. ಪ್ರವಕ್ತ ತಮ್ಮ ಮಧ್ಯದಲ್ಲಿದ್ದು ಜ್ಞಾನವನ್ನು ತಿಳಿಸುವುದರಿಂದ, ಜಿಬ್ರಯೇಲ್ ಹೇಳುವುದು ಪ್ರವಕ್ತ ಒಬ್ಬನಿಗೇ ಕೇಳಿಸುವುದರಿಂದ, ಆ ವಿಷಯ ಬಹುಸ್ವಲ್ಪ ಜನರಿಗೆ ಹೊರತು ಉಳಿದವರಿಗೆಲ್ಲ ಪ್ರವಕ್ತ ಹೇಳಿದಂತೇ ಇರುತ್ತಿತ್ತು.

ಹೀಗೆ ನಡೆಯುತ್ತಾ 23 ವರ್ಷಗಳು ಕಳೆದುಹೋಗಿ ಒಂದು ದಿನ ಪ್ರವಕ್ತರವರು ರಾತ್ರಿ ಎರಡರಿಂದ ಮೂರು ಗಂಟೆಗಳ ಮಧ್ಯದಲ್ಲಿ ಸ್ಮಶಾನದೊಳಗೆ ಹೋಗಿ ಮರಣಿಸಿದವರಿಗೆಲ್ಲ ಶುಭ ಕೈಗೂಡಬೇಕೆಂದು ಪ್ರಾರ್ಥನೆ ಮಾಡಿ ಬರುತ್ತಿರುವಾಗ ಸೂಕ್ಷ್ಮ ಶಬ್ದ ಒಂದು ಆತನಿಗೆ ಕೇಳಿಸಿದೆ. ಇತರರು ಬಹಳಜನ ತನ್ನ ಸುತ್ತಲೂ ಇದ್ದರೂ, ಆ ಶಬ್ದ ತನಗೊಬ್ಬನಿಗೆ ಕೇಳಿಸುವುದರಿಂದ, ಜಿಬ್ರಯೇಲ್‌ರವರೇ ಆ ಮಾತನ್ನು ಹೇಳಿದ್ದಾರೆಂದು ಪ್ರವಕ್ತ ಅಂದುಕೊಳ್ಳುವು ದಾಗಿದೆ. ಆದರೇ ಜಿಬ್ರಯೇಲ್ ಆ ಮಾತು ಹೇಳಲಿಲ್ಲವೆಂದು ಪ್ರವಕ್ತನಿಗೆ ಗೊತ್ತಿಲ್ಲ. ಪ್ರವಕ್ತಗೆ ಕಾಣಿಸುವುದಿಲ್ಲ. ಕೇವಲ ಕೇಳಿಸುವುದೇ ಆಗಿರುವುದರಿಂದ ಅಲ್ಲಿ ಜಿಬ್ರಯೇಲ್ ಇದ್ದು ಹೇಳಿದ್ದಾನೆಂದು ಅಂದುಕೊಂಡಿದ್ದಾರೆ. ಆ ಮಾತಿನಿಂದ "ತನಗೆ ಸಾವು ಹತ್ತಿರವಾಗಿದೆಯೆಂದು" ತಿಳಿದುಕೊಂಡಿದ್ದಾನೆ. ಆ ಮಾತು ಕೇಳಿದ ನಂತರ ತೀವ್ರವಾದ ಜ್ವರ, ಹೊಟ್ಟೆನೋವು ಬರುವುದರಿಂದ ಕಳೆದ ಸ್ವಲ್ಪಕಾಲದ ಕೆಳಗೆ ತನ್ನಮೇಲೆ ನಡೆದ ವಿಷ ಪ್ರಯೋಗದಿಂದ ತನಗೆ ಆ ಬಾಧೆ ಬಂದಿದೆಯೆಂದು ಅಂದುಕೊಂಡಿದ್ದಾನೆ. ಆ ಬಾಧೆಯನ್ನು ಸುಮಾರು ಹನ್ನೊಂದು

ದಿನಗಳು ಅನುಭವಿಸಿ ಮರಣಿಸಿದ್ದಾನೆ. ಪ್ರವಕ್ತ ಮರಣಿಸಿದ ವಿಷಯ ಜಿಬ್ರಯೇಲ್‌ಗೆ ಕೂಡಾ ತಿಳಿದಿಲ್ಲ. ನಂತರ ಜಿಬ್ರಯೇಲ್ ಭೂಮಿಮೇಲಕ್ಕೆ ಬಂದು ಪ್ರವಕ್ತ ಮರಣಿಸಿದಕ್ಕೆ ಬಾಧೆಪಟ್ಟಿದ್ದಾನೆ. ಆಯುಷ್ಷು ಮುಗಿದುಹೋದಾಗ, ದೇವರು ಕೊಟ್ಟ ಗಡುವು ಮುಗಿದುಹೋದಾಗ ಯಾರಾದರೂ ತಪ್ಪದೆ ಹೋಗಬೇಕಾದ್ದೆ ಎಂದು ಜಿಬ್ರಯೇಲ್ ಅಂದುಕೊಂಡು ತಿರುಗಿ ಹೋಗಿದ್ದಾನೆ. ಆದರೇ ಇಲ್ಲಿಯವರೆಗು "ನಿನಗೆ ಸಾವು ಹತ್ತಿರವಾಗಿದೆ" ಎಂದು ಯಾರು ಹೇಳಿದ್ದಾರೊ ಯಾರಿಗೂ ತಿಳಿದಿಲ್ಲ. ಜಿಬ್ರಯೇಲ್‌ಗೆ ಆ ಮಾತೇ ಗೊತ್ತಿಲ್ಲ.

## ಸಮಾಪ್ತಿ



**ಅಸತ್ಯವನ್ನು ಸಾವಿರಜನ ಹೇಳಿದರೂ. ಅದು ಸತ್ಯವಲ್ಲ.**
**ಸತ್ಯವನ್ನು ಸಾವಿರಜನ ಅಲ್ಲಗಳೆದರೂ. ಅದು ಅಸತ್ಯವಲ್ಲ.**



**ನಿಜವಾದ ರಚನಕಾರರು ಯಾರೋ ಗೊತ್ತಾ?**

**ಸಂಚಲನಾತ್ಮಕ ರಚನಕಾರ**

| | | |
|---|---|---|
| ಸಂ | = | ಒಳ್ಳೆ |
| ಚಲನೆ | = | ಚೈತನ್ಯ ಹೊಂದಿದ |
| ಆತ್ಮಕ | = | ಎರಡನೆ ಆತ್ಮ |
| ರಚನಕಾರ | = | ಬರೆಸಿದವನು |

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ,
ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

# ದೈವ ಗ್ರಂಥದಲ್ಲಿ ಸತ್ಯಾಸತ್ಯ ವಿಚಕ್ಷಣೆ

## ಯೋಗೀಶ್ವರರವರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ಪ್ರಕಟನೆಗಳು




















































